# ಕಲಿಕೆಯಕುರಿತು, 1958

## ಜೆ. ಕೃಷ್ಣಮೂರ್ತಿ

ಉಲ್ಬಣಿಸುತ್ತಿರುವ ಬಿಕ್ಕಟ್ಟುಗಳು ಮತ್ತು ಸಮಸ್ಯೆಗಳನ್ನು ನಾವು ಎದುರಿಸುತ್ತಿರುವ ಈ ಸನ್ನಿವೇಶದಲ್ಲಿ, ಇಡೀ ಬದುಕಿನ ಪ್ರಕ್ರಿಯೆಯನ್ನು ಅರಿಯುವ ಮೂಲಕ ಪ್ರಕಟಗೊಳ್ಳುವ ಪೂರ್ಣತಃ ವಿಭಿನ್ನ ಬಗೆಯ ನೈತಿಕತೆ, ನಡತೆ ಮತ್ತು ಕ್ರಿಯೆಗಳು ತುರ್ತಿನ ಅಗತ್ಯಗಳಾಗಿವೆ ಎಂದು ನಮಗೆ ತೋರುತ್ತಿದೆ. ಈ ಸಮಸ್ಯೆಗಳನ್ನು ನಾವು ರಾಜಕೀಯ ಮತ್ತು ಸಾಂಸ್ಥಿಕ ವಿಧಾನಗಳು, ಆರ್ಥಿಕ ಮರುಹೊಂದಾಣಿಕೆ ಮತ್ತು ಸುಧಾರಣೆಗಳ ಮೂಲಕ ಪರಿಹರಿಸಲು ಪ್ರಯತ್ನಿಸುತ್ತೇವೆ. ಇವು ತಾತ್ಕಾಲಿಕ ಪರಿಹಾರ ನೀಡಬಹುದಾದರೂ, ಮನುಷ್ಯನ ಅಸ್ತಿತ್ವದ ಸಂಕೀರ್ಣ ತೊಡಕುಗಳನ್ನು ಈ ಯಾವ ವಿಧಾನಗಳೂ ಎಂದಿಗೂ ಪರಿಹರಿಸಲಾರವು. ಈ ಎಲ್ಲ ಸುಧಾರಣೆಗಳು ಎಷ್ಟೇ ವ್ಯಾಪಕ ಹಾಗೂ ಶಾಶ್ವತವಾಗಿರುವಂತೆ ತೋರಿದರೂ, ಅವು ಸ್ವತಃ ಇನ್ನೂ ಹೆಚ್ಚಿನ ಗೊಂದಲ ಮತ್ತು ಸುಧಾರಣೆಗಳನ್ನು ಹುಟ್ಟುಹಾಕುತ್ತವೆ. ಸುಧಾರಣೆಯು ಎಷ್ಟೇ ಅವಶ್ಯವಾಗಿದ್ದರೂ, ಮನುಷ್ಯನ ಸಂಕೀರ್ಣತೆಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳದೇ ತರುವ ಸುಧಾರಣೆಯು ಮತ್ತಷ್ಟು ಸುಧಾರಣೆಗಳ ಗೊಂದಲಮಯ ಬೇಡಿಕೆಗೆ ಆಸ್ಪದ ನೀಡುತ್ತದೆ. ಸುಧಾರಣೆಗೆ ಕೊನೆಯೇ ಇರುವುದಿಲ್ಲ.ಈ ಮಾರ್ಗಗಳಲ್ಲಿ ಮೂಲಭೂತ ಪರಿಹಾರವೂ ಲಭ್ಯವಿಲ್ಲ.

ರಾಜಕೀಯ, ಆರ್ಥಿಕ, ಅಥವಾ ಸಾಮಾಜಿಕ ಕ್ರಾಂತಿಗಳು ಕೂಡ ಈ ಸಮಸ್ಯೆಗೆ ಉತ್ತರವಲ್ಲ; ಏಕೆಂದರೆ, ಅವು ಭೀಕರ ನಿರಂಕುಶ ಪ್ರಭುತ್ವವನ್ನು ಸೃಷ್ಟಿಸಿವೆ ಇಲ್ಲವೆ, ಪ್ರಭುತ್ವದ ಅಧಿಕಾರವು ಇನ್ನೊಂದು ಗುಂಪಿಗೆ ಹಸ್ತಾಂತರಗೊಂಡಿದೆ. ಇಂತಹ ಕ್ರಾಂತಿಗಳು, ಅವು ಯಾವ ಕಾಲದಲ್ಲಿಯೇ ಸಂಭವಿಸಲಿ, ಗೊಂದಲ ಮತ್ತು ಸಂಘರ್ಷಗಳಿಂದ ಮುಕ್ತವಾಗಲು ಇರುವ ದಾರಿಗಳಲ್ಲ. ಆದರೆ, ಸಂಪೂರ್ಣವಾಗಿ ಬೇರೆಯದೇ ಆದ ಕ್ರಾಂತಿಯೊಂದಿದೆ. ಆತಂಕಗಳು, ಸಂಘರ್ಷಗಳು ಮತ್ತು ನಿರಾಶೆಗಳ ಕೊನೆಯಿಲ್ಲದ ಸರಣಿಯಿಂದ ನಾವು ಬಿಡುಗಡೆ ಪಡೆಯಬೇಕಿದ್ದರೆ ಈ ಕ್ರಾಂತಿ ಸಂಭವಿಸಲೇಬೇಕು. ಅಂತಿಮವಾಗಿ ನಿಷ್ಪ್ರಯೋಜಕವೆಂದು ಸಾಬೀತುಗೊಳ್ಳುವ ಸೈದ್ಧಾಂತಿಕ ಮತ್ತು ಭಾವಕಲ್ಪನೆಯ (identional) ಸ್ತರದಿಂದ ಈ ಕ್ರಾಂತಿಯು ಆರಂಭವಾಗದೇ, ಮನೋವೃತ್ತಿಯಲ್ಲಿಯೇ ಮೂಲಭೂತ ಪರಿವರ್ತನೆಯನ್ನು ಅದು ಉಪಕ್ರಮಿಸತಕ್ಕದ್ದು. ಈ ಕ್ರಾಂತಿಯು ಸರಿಯಾದ ಶಿಕ್ಷಣದ ಮೂಲಕ ಇಡೀ ಮನೋವೃತ್ತಿಯಲ್ಲಿ ಸಂಭವಿಸತಕ್ಕದ್ದೇ ವಿನಃ ಕೇವಲ ಆಲೋಚನೆಯಲ್ಲಿ ಅಲ್ಲ. ಆಲೋಚನೆಯು ಫಲಿತಾಂಶವೇ ಹೊರತು, ಕಾರಕವಲ್ಲ (Cause). ಕಾರಕದಲ್ಲಿಯೇ ಮೂಲಭೂತವಾದ ಪರಿವರ್ತನೆ ಸಾಧ್ಯವಾಗಬೇಕಲ್ಲದೇ ಅದರ ಫಲಿತಾಂಶದಲ್ಲಿಅಲ್ಲ. ನಾವು ಫಲಿತಾಂಶಗಳೊಂದಿಗೆ, ಲಕ್ಷಣಗಳೊಂದಿಗೆ ಆಟವಾಡುತ್ತಿದ್ದೇವೆ; ಪ್ರಮುಖವಾದ, ಮೂಲಭೂತವಾದ ಬದಲಾವಣೆಯನ್ನು ತರುತ್ತಿಲ್ಲ; ಹಳೆಯ ಆಲೋಚನೆಗಳು, ಸಂಪ್ರದಾಯಗಳು ಮತ್ತು ಅಭ್ಯಾಸಗಳನ್ನು ಕಿತ್ತೊಗೆಯುತ್ತಿಲ್ಲ. ನಮ್ಮ ಕಾಳಜಿ ಇರುವುದು ಈ ಕ್ರಾಂತಿಯ ಬಗೆಗೆ. ಸರಿಯಾದ ಶಿಕ್ಷಣ ಮಾತ್ರ ಇದನ್ನುಅಸ್ತಿತ್ವಕ್ಕೆ ತರಬಲ್ಲದು.

ಹುಡುಕುವ ಮತ್ತು ಕಲಿಯುವ ಸಾಮರ್ಥ್ಯವು ಮನಸ್ಸಿನ ಕೆಲಸ. `ಕಲಿಯುವುದು' ಎಂದರೆ ಕೇವಲ ನೆನಪಿನ ಶಕ್ತಿಯಸಂವರ್ಧನೆ ಮತ್ತು ಮಾಹಿತಿ ಸಂಗ್ರಹಿಸುವುದು ಎಂಬ ಅರ್ಥದಲ್ಲಿ ಹೇಳುತ್ತಿಲ್ಲ, ಕಲಿಕೆಯು ಯಾವುದೇ ಭ್ರಮೆಗಳಿಲ್ಲದೇ ಸ್ಪಷ್ಟವಾಗಿ ಹಾಗೂ ವಿವೇಕಯುತವಾಗಿ ಆಲೋಚಿಸುವ ಸಾಮರ್ಥ್ಯ, ನಂಬಿಕೆ, ಆದರ್ಶಗಳಿಂದಲ್ಲದೇ ವಾಸ್ತವವನ್ನು ಆಧರಿಸಿದ ಪ್ರಾರಂಭ ಎಂಬರ್ಥದಲ್ಲಿ ಹೇಳುತ್ತಿದ್ದೇವೆ. ನಿರ್ಧಾರಗಳಿಂದ

ವಿಚಾರವು ಹುಟ್ಟುವಲ್ಲಿ ಕಲಿಕೆ ಇರುವುದಿಲ್ಲ. `ಜ್ಞಾನ' ಎಂದು ಕರೆಯಲಾಗುವ ಮಾಹಿತಿ ಸಂಗ್ರಹಣೆಯಷ್ಟೇ ಕಲಿಕೆಯಲ್ಲ. ಕಲಿಕೆಯು ಅರಿಯುವುದರ ಬಗೆಗಿನ ಪ್ರೀತಿಯನ್ನು ಮತ್ತು ಕಲಿಯುವ ಪ್ರೀತಿಗಾಗಿ ಕಲಿಯುವುದನ್ನು ಧ್ವನಿಸುತ್ತದೆ. ಯಾವುದೇ ಬಗೆಯ ಬಲವಂತವಿಲ್ಲದಿದ್ದಾಗ ಮಾತ್ರ ಕಲಿಕೆ ಸಾಧ್ಯವಾಗುತ್ತದೆ. ಬಲವಂತವು; ಅನುರಾಗ ಅಥವಾ ಭಯ, ಮನವೊಲಿಸುವ ಪ್ರೋತ್ಸಾಹ ಅಥವಾ ಜಿಜ್ಞಾಸೆಯ ಸೂಕ್ಷ್ಮ ಪ್ರಕಾರಗಳ ಮೂಲಕ ಬೀರುವ ಪ್ರತಿಯೊಂದು ಬಗೆಯ ಪ್ರಭಾವವನ್ನು ಸೂಚಿಸುತ್ತದೆ ಅಲ್ಲವೆ?

ಹೋಲಿಸುವುದರಿಂದ ಕಲಿಕೆಗೆ ಪ್ರೇರಣೆ ದೊರೆಯುತ್ತದೆಎಂದು ಬಹಳಷ್ಟು ಜನ ಭಾವಿಸುತ್ತಾರೆ. ಆದರೆ, ಸತ್ಯವುಇದಕ್ಕೆ ವಿರುದ್ಧವಾಗಿದೆ. ಹೋಲಿಸುವಿಕೆಯು ಹತಾಶೆಯನ್ನುಂಟುಮಾಡಿ, ಕೇವಲ ಅಸೂಯೆಯನ್ನು ಉತ್ತೇಜಿಸುತ್ತದೆ. ಇದನ್ನೇ ಸ್ಪರ್ಧೆಯೆಂದು ಕರೆಯಲಾಗುತ್ತದೆ. ಸೂಕ್ಷ್ಮ ಅಥವಾ ಮನವೊಲಿಕೆಯ ನಿಟ್ಟಿನ ಸುಸ್ಪಷ್ಟ ಪ್ರಕಾರಗಳು ಕಲಿಕೆಗೆ ಅಡೆತಡೆಯೊಡ್ಡಿ ಕೇವಲ ಭಯವನ್ನುಂಟುಮಾಡುತ್ತವೆ. ಮಹತ್ವಾಕಾಂಕ್ಷೆಯು ಭಯವನ್ನು ಹುಟ್ಟುಹಾಕುತ್ತದೆ. ಅದು ವೈಯಕ್ತಿಕವೇ ಆಗಿರಲಿ ಅಥವಾ ಸಾಮೂಹಿಕವಾಗಿಯೇ ಗುರುತಿಸಲ್ಪಟ್ಟಿರಲಿ; ಸದಾ ಸಮಾಜ ವಿರೋಧಿಯಾಗಿರುತ್ತದೆ. ಉದಾತ್ತ ಮಹತ್ವಾಕಾಂಕ್ಷೆ ಎಂಬುದು, ತನ್ನ ಸಂಬಂಧಗಳಲ್ಲಿ ಸದಾ ವಿನಾಶಕಾರಿಯಾಗಿರುತ್ತದೆ.

ಅಂತರ್ವಿರೋಧಿಯಾಗದ, ಹತಾಶೆಗೊಳ್ಳದ, ದ್ವೇಷ ಅಥವಾ ಸಿನಿಕತನಕ್ಕೆ ಪಕ್ಕಾಗದ, ಬದುಕಿನ ಅನೇಕ ಸವಾಲುಗಳಿಂದ ಪಲಾಯನಕ್ಕೆ ಯತ್ನಿಸದ, ಆದರೆ ಅವುಗಳನ್ನು ಸಮಗ್ರವಾಗಿ ನಿಭಾಯಿಸುವ ಸಾಮರ್ಥ್ಯವುಳ್ಳ ಋಜುಮನಸ್ಸಿನ ವಿಕಸನವನ್ನು ಪ್ರೋತ್ಸಾಹಿಸಬೇಕಾದ ಅಗತ್ಯವಿದೆ. ಇಂಥ ಮನಸ್ಸು ತನ್ನಲ್ಲೇ ಇರುವ ನಿರ್ಬಂಧನೆಗಳು, ತನ್ನ ಉದ್ದೇಶಗಳು ಮತ್ತು ಅನುಸರಣೆಗಳ ಬಗ್ಗೆ ಅರಿವನ್ನು ಹೊಂದಿರುವುದು ಅತ್ಯಂತ ಅವಶ್ಯ.

ಸುಶೀಲ ಮನಸ್ಸಿನ ವಿಕಸನವು ನಮ್ಮ ಪ್ರಧಾನ ಕಾಳಜಿಗಳಲ್ಲಿ ಒಂದಾಗಿರುವುದರಿಂದ, ಶಿಕ್ಷಕನು ಹೇಗೆ ಕಲಿಸುತ್ತಾನೆ ಎಂಬುದು ತುಂಬ ಮುಖ್ಯವಾಗುತ್ತದೆ. ಕೇವಲ ಮಾಹಿತಿಯನ್ನು ಒದಗಿಸದೆ, ಮನಸ್ಸಿನ ಸಮಗ್ರ ವಿಕಸನವು ಶಿಕ್ಷಕನ ಪ್ರಮುಖ ಕಾಳಜಿಯಾಗಿರುವುದರಿಂದ; ಪ್ರತಿಯೊಂದು ಪ್ರಕಾರದ ಚರ್ಚೆ, ಶೋಧನೆಗೆ ಆಹ್ವಾನ ಮತ್ತು ಸ್ವತಂತ್ರ ಆಲೋಚನೆಯ ಮೂಲಕ ಶಿಕ್ಷಕನು ಜ್ಞಾನ ಅಥವಾ ಮಾಹಿತಿಯನ್ನು ಒದಗಿಸಬೇಕಾಗುತ್ತದೆ. `ನಾನು ತಿಳಿದವನು' ಎಂಬ ಅಧಿಕಾರಕ್ಕೆ ಕಲಿಕೆಯಲ್ಲಿ ಆಸ್ಪದವಿಲ್ಲ. ಶಿಕ್ಷಕ ಮತ್ತು ವಿದ್ಯಾರ್ಥಿ ಇಬ್ಬರೂ ಪರಸ್ಪರರೊಂದಿಗಿನ ಈ ವಿಶಿಷ್ಟಸಂಬಂಧದಲ್ಲಿ ಕಲಿಯುತ್ತಿರುತ್ತಾರೆ. ಆದರೆ, ಶಿಕ್ಷಕನು ಚಿಂತನೆಯ ಕ್ರಮಬದ್ಧತೆಯನ್ನು ಕಡೆಗಣಿಸುತ್ತಾನೆಂಬುದು ಇದರರ್ಥವಲ್ಲ. ಜ್ಞಾನಕ್ಕೆ ಸಂಬಂಧಿಸಿದ ಕೇವಲ ಸಮರ್ಥನಾತ್ಮಕ ಹೇಳಿಕೆಗಳ ಕಾರ್ಯವಿಧಾನದಿಂದ ಈ ಕ್ರಮಬದ್ಧತೆ ಸಾಧ್ಯವಾಗುವಂಥದಲ್ಲ; ತಾನು `ಅರಿವಿನ' ವಿಕಸನದಲ್ಲಿ ತೊಡಗಿದ್ದೇನೆ ಎಂಬುದನ್ನು ಶಿಕ್ಷಕನು ಅರ್ಥಮಾಡಿಕೊಂಡರೆ, ಸ್ವಾತಂತ್ರ್ಯದ ಭಾವ ಸಹಜವಾಗಿ ಇರಲೇಬೇಕಾಗುತ್ತದೆ. ಈ ಸ್ವಾತಂತ್ರ್ಯವು, ತನಗೆ ಇಷ್ಟವಾದುದನ್ನು ಮಾಡುವ ಅಥವಾ ಕೇವಲ ಅಲ್ಲಗಳೆಯುವ ಉತ್ಸಾಹದಲ್ಲಿ ಕೈಗೊಳ್ಳುವ ಚಿಂತನೆಯಲ್ಲ. ಈ ಸ್ವಾತಂತ್ರ್ಯವು; ವಿದ್ಯಾರ್ಥಿಗೆ ತನ್ನ ಸ್ವಂತ ಆಲೋಚನೆ ಮತ್ತು ಕ್ರಿಯೆಯ ಮೂಲಕ ಮನಸ್ಸಿನ ತೀವ್ರ ಇಚ್ಛೆಗಳು ಮತ್ತು ಉದ್ದೇಶಗಳ ಕುರಿತಂತೆ ಅರಿವನ್ನು ಮೂಡಿಸುವ ನಿಟ್ಟಿನಲ್ಲಿ ಮನಸ್ಸಿಗೆ ಸಹಾಯವನ್ನು ಒದಗಿಸಲು ಇರುವಂತಹುದು.

ಕಟ್ಟುಪಾಡಿಗೆ ಒಳಗಾದ ಮನಸ್ಸಾಗಲೀ, ಆಸೆಗಳನ್ನು ಅದುಮಿಟ್ಟ ಮನಸ್ಸಾಗಲೀ ಸ್ವತಂತ್ರವಾಗಿರಲು ಎಂದೂ ಸಾಧ್ಯವಿಲ್ಲ. ಆಸೆಯ ಸಮಸ್ತ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಂಡಿರುವ ಮನಸ್ಸು ಮಾತ್ರ ಸ್ವತಂತ್ರವಾಗಿರುತ್ತದೆ. ಕಟ್ಟುಪಾಡು ಯಾವಾಗಲೂ ವಿಚಾರ ಮತ್ತು ನಂಬಿಕೆ ಆಧಾರಿತ ವ್ಯವಸ್ಥೆಗಳ ಚೌಕಟ್ಟಿನೊಳಗಿನ

ಚಲನೆಯನ್ನು ಪ್ರೋತ್ಸಾಹಿಸುತ್ತದೆ, ಅಲ್ಲವೇ? ಇಂಥ ಮನಸ್ಸು ಅರಿವನ್ನು ಪಡೆಯಲು ಎಂದೂ ಸ್ವತ್ರವಾಗಿರುವುದಿಲ್ಲ. ಇಂಥ ಕಟ್ಟುಪಾಡು ಅಧಿಕಾರಕ್ಕೆ ಅಡಿಯಾಳಾಗಿರುವಂತೆ ಮಾಡುತ್ತದೆ, ಅಥವಾ ಕಾರ್ಯಾತ್ಮಕ ಸಾಮರ್ಥ್ಯವನ್ನು ಬಯಸುವ ಸಾಮಾಜಿಕ ವಿನ್ಯಾಸದ ಒಳಗೇ ಕೆಲಸ ಮಾಡಬಲ್ಲ ಸಾಮರ್ಥ್ಯವನ್ನು ತರುತ್ತದೆಯೇ ವಿನಃ, ತನ್ನದೇಆದ ಸ್ವ-ಸಾಮರ್ಥ್ಯವಿರುವ ಅರಿವನ್ನು ತರಲಾಗದು. ಕೇವಲ ನೆನಪನ್ನು ಆಧರಿಸಿ ಸಾಮರ್ಥ್ಯವನ್ನು ಸಂವೃದ್ಧಗೊಳಿಸಿರುವ ಮನಸ್ಸು, ಆಶ್ಚರ್ಯಕರ ಸಾಮರ್ಥ್ಯ ಮತ್ತು ಖಚಿತತೆಯಿಂದ ಕಾರ್ಯನಿರ್ವಹಿಸುವ ಆಧುನಿಕಯಂತ್ರ, ಕಂಪ್ಯೂಟರ್‌ನಂತೆ.

ಅಧಿಕಾರವು ನಿರ್ದಿಷ್ಟ ದಿಕ್ಕುಗಳಲ್ಲಿ ಮಾತ್ರ ಆಲೋಚಿಸುವಂತೆ ಪ್ರಭಾವ ಬೀರುತ್ತದೆ. ನಿರ್ಣಯಗಳ (conclusions) ನಿಟ್ಟಿನಲ್ಲಿ ಚಿಂತನೆ ನಡೆಸುವುದು, ನಿರ್ದಿಷ್ಟ ಹಾದಿಗಳಲ್ಲಿ ಚಿಂತನೆ ನಡೆಸುವಂತೆ ನಿರ್ದೇಶಿತವಾಗಿರುವುದು ಚಿಂತನೆ ಅಲ್ಲವೇ ಅಲ್ಲ; ಈ ಬಗೆಯ `ಆಲೋಚನೆ' ಕೇವಲ ಮಾನವಯಂತ್ರದಂತೆ ಕಾರ್ಯಶೀಲವಾಗಿರುವುದಷ್ಟೇ. ಇದು ವಿಚಾರಹೀನ ಅತೃಪ್ತಿಯನ್ನು ಹುಟ್ಟುಹಾಕಿ; ಹತಾಶೆ, ದುಃಖ ಮುಂತಾದುವನ್ನು ತಂದೊಡ್ಡುತ್ತದೆ. ನಮ್ಮ ಕಾಳಜಿ ಇರುವುದು ಪ್ರತಿಯೊಬ್ಬ ಮನುಷ್ಯನಲ್ಲಿನ ಅತ್ಯುನ್ನತ ಹಾಗೂ ಸಂಪೂರ್ಣ ಸಾಮರ್ಥ್ಯದ ಸಮಗ್ರ ವಿಕಸನಹಾಗೂ; ಯಾವುದೇ ಒಬ್ಬ ವ್ಯಕ್ತಿಯು ವಿಕಸಿತಗೊಳ್ಳಲು ಸಾಧ್ಯವಿರುವ ಸಾಮರ್ಥ್ಯದ ವಿಕಸನವನ್ನು ಕುರಿತೇ ವಿನಃ, ಶಿಕ್ಷಕನ ಪರಿಕಲ್ಪನೆಯಲ್ಲಿನ ಅತ್ಯುನ್ನತ ಸಾಮರ್ಥ್ಯಕ್ಕೆ ಅನುಗುಣವಾದ ವಿಕಸನದ ಬಗೆಗೆ ಅಲ್ಲ.

ಯಾವುದೇ ಬಗೆಯ ಹೋಲಿಕೆಯಉತ್ಸಾಹವು, ವಿಜ್ಞಾನಿಯಾಗಿ ಆಗಲಿಅಥವಾಒಬ್ಬತೋಟದ ಮಾಲಿಯಾಗಿ ಆಗಲಿವ್ಯಕ್ತಿಯ ಈ ಸಂಪೂರ್ಣವಿಕಸನವನ್ನುತಡೆಯುತ್ತದೆ. ಹೋಲಿಕೆಯುಇಲ್ಲದಿರುವಾಗÀತೋಟಿಯ ಸಂಪೂರ್ಣ ಸಾಮರ್ಥ್ಯವೇ ವಿಜ್ಞಾನಿಯ ಸಂಪೂರ್ಣ ಸಾಮರ್ಥ್ಯವಾಗಿರುತ್ತದೆ.ಆದರೆ ಹೋಲಿಕೆ ಮಾಡಿದಾಗಅವಮಾನ ಮತ್ತುಅಸೂಯೆಯ ಪ್ರತಿಕ್ರಿಯೆಗಳು ಮನುಷ್ಯರ ನಡುವೆ ಸಂಘರ್ಷವನ್ನು ಹುಟ್ಟುಹಾಕುತ್ತ್ತವೆ. ಪ್ರೀತಿಯು ಹೋಲಿಸುವಂತಹುದಲ್ಲ. ಬಡವರಲ್ಲಿಯೇಇರಲಿ, ಶ್ರೀಮಂತರಲ್ಲಿಯೇ ಇರಲಿ ಪ್ರೀತಿಯು ಪ್ರೀತಿಯೇಆಗಿರುವಂತೆ,ದುಃಖವುದುBಖವೇಆಗಿರುತ್ತದೆ. ಅದನ್ನುದೊಡ್ಡÀಅಥವಾ ಸಣ್ಣದುಃಖವೆಂದು ಹೋಲಿಸಲಾಗದು.

ವ್ಯಕ್ತಿಯಸಂ ಪೂರ್ಣವಿಕಸನವು ಸಮಾನರ ಸಮಾಜವನ್ನು ಅಸ್ತಿತ್ವಕ್ಕೆ ತರುತ್ತದೆ. ಕೇವಲ ಆರ್ಥಿಕ ಅಥವಾ ಆಧ್ಯಾತ್ಮಿಕ ಮಟ್ಟದಲ್ಲಿ ಸಮಾನತೆಯನ್ನು ತರುವ ಈಗಿನ ಸಾಮಾಜಿಕ ಹೋರಾಟಕ್ಕೆ ಯಾವ ಅರ್ಥವೂ ಇಲ್ಲ. ಸಮಾನತೆ ಸಾಧಿಸಲೆಂದು ಕೈಗೊಳ್ಳುವ ಸಾಮಾಜಿಕ ಸುಧಾರಣೆಗಳು ಬೇರೊಂದು ಬಗೆಯ ಸಮಾಜ ವಿರೋಧಿ ಚಟುವಟಿಕೆಗಳನ್ನು ಹುಟ್ಟುಹಾಕುತ್ತವೆ. ಸಾಮರ್ಥ್ಯಗಳ ಹೋಲಿಕೆ ಇಲ್ಲದೆ ಯುಕ್ತ ಶಿಕ್ಷಣವಿದ್ದಲ್ಲಿ, ಹೋಲಿಸುವ ಸಾಮರ್ಥ್ಯಗಳೊಂದಿಗಿನ ದ್ವೇಷವು ಇಲ್ಲವಾಗುತ್ತದೆ. ಆಗ, ಸಾಮಾಜಿಕ ಅಥವಾ ಇನ್ನಾವುದೇ ಬಗೆಯ ಸುಧಾರಣೆಗಳ ಅಗತ್ಯವೇಇರುವುದಿಲ್ಲ.

ಇಲ್ಲಿ ನಾವು ಕಾರ್ಯ (Function) ಹಾಗೂ ಸ್ಥಾನಮಾನದ (Status) ನಡುವೆ ಭೇದವೆಣಿಸಲೇಬೇಕು. ಕಾರ್ಯವನ್ನು ಶ್ರೇಷ್ಠ ಮತ್ತು ಕನಿಷ್ಠ ಎಂದು ಹೋಲಿಸಿದಾಗ ಸ್ಥಾನಮಾನವು ತನ್ನೆಲ್ಲ ಭಾವನಾತ್ಮಕ ಮತ್ತು ಶ್ರೇಣೀಕೃತ ಪ್ರತಿಷ್ಠೆಯೊಂದಿಗೆ ಉದ್ಭವಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಸಂಪೂರ್ಣ ಸಾಮರ್ಥ್ಯದಲ್ಲಿ ವಿಕಸಿತಗೊಂಡಾಗ, ಕಾರ್ಯ ಹಾಗೂ ಸ್ಥಾನಮಾನದ ನಡುವೆ ವಿಭಜನೆ ಇರುವುದಿಲ್ಲ; ಆಗ ಶಿಕ್ಷಕನಾಗಿಯೋ ಅಥವಾ ಪ್ರಧಾನಮಂತ್ರಿಯಾಗಿಯೋ ಆ ಸಾಮರ್ಥ್ಯದ ಅಭಿವ್ಯಕ್ತಿ ಮಾತ್ರ ಇರುತ್ತದೆ; ಆಗ ಸ್ಥಾನಮಾನವು ತನ್ನ ವಿಷದಕೊಂಡಿಯನ್ನು ಕಳೆದುಕೊಳ್ಳುತ್ತದೆ. ಈಗ ಕಾರ್ಯಾತ್ಮಕ ಅಥವಾ ತಾಂತ್ರಿಕ ಸಾಮರ್ಥ್ಯವನ್ನು ತನ್ನ ಹೆಸರಿನ ನಂತರದ ಬಿ.ಎ ಅಥವಾ ಪಿ.ಎಚ್‌ಡಿ ಮೂಲಕ

ಗುರುತಿಸಲಾಗುತ್ತಿದೆ. ಆದರೆ ಮಾನವನ ಇಡೀ ವ್ಯಕ್ತಿತ್ವದ ಪೂರ್ಣ ವಿಕಸನವು ನಮ್ಮ ಕಾಳಜಿಯಾಗಿದ್ದು, ಇಂತಹ ವ್ಯಕ್ತಿಯು ತನ್ನ ಹೆಸರಿನ ಮುಂದೆ ಪದವಿಯ ಮೊದಲ ಅಕ್ಷರಗಳನ್ನು ಸೇರಿಸಬಹುದು ಅಥವಾ ಸೇರಿಸದಿರಬಹುದು. ಆದರೆ ವ್ಯಕ್ತಿಯು ತನ್ನ ಇಷ್ಟದಂತೆ ಪದವಿಯನ್ನು ಪಡೆಯುವ ಅಥವಾ ಪಡೆದುಕೊಳ್ಳದೇ ಇರುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಈತನ ಸಾಮರ್ಥ್ಯವನ್ನು ಪದವಿಯಿಂದ ಅಳೆಯಲಾಗುವುದಿಲ್ಲ. ಇವನಿಗೆ ತನ್ನ ಸ್ವಂತ ಸಾಮರ್ಥ್ಯಗಳ ಸ್ವಯಂ ಅರಿವು ಇರುತ್ತದೆ. ಇವನ ಸಾಮರ್ಥ್ಯದ ಅಭಿವ್ಯಕ್ತಿಯು ಕೇವಲ ತಾಂತ್ರಿಕ ಸಾಮರ್ಥ್ಯವು ಹುಟ್ಟುಹಾಕುವ ಅಹಂ-ಕೇಂದ್ರಿತ ಆತ್ಮವಿಶ್ವಾಸವನ್ನು ತರುವುದಿಲ್ಲ; ಇಂಥ ನಂಬಿಕೆಯು ತುಲನಾತ್ಮಕವಾಗಿರುವುದರಿಂದ (comparative) ಸಮಾಜವಿರೋಧಿಯಾಗಿರುತ್ತದೆ. ಹೋಲಿಕೆಯು ಕೇವಲ ಪ್ರಯೋಜನಕಾರಿ ಉದ್ದೇಶಗಳಿಗಾಗಿ ಅಸ್ತಿತ್ವದಲ್ಲಿರುತ್ತದೆ. ಆದರೆ ಸಾಮರ್ಥ್ಯಗಳನ್ನು ವರ್ಗೀಕರಿಸಿ ಶ್ರೇಷ್ಠ ಅಥವಾ ಕನಿಷ್ಠವೆಂಬುದಾಗಿ ಮೌಲ್ಯಾಂಕನಗೊಳಿಸುವುದು ಶಿಕ್ಷಕನ ಕೆಲಸವಲ್ಲ.

ವ್ಯಕ್ತಿಯ ಸಂಪೂರ್ಣ ವಿಕಸನವು ನಮ್ಮ ಕಾಳಜಿಯಾಗಿರುವುದರಿಂದ, ವಿದ್ಯಾರ್ಥಿಯು ತನ್ನ ಸ್ವಂತದ ವಿಷಯಗಳನ್ನು ಆಯ್ದುಕೊಳ್ಳಲು ಆರಂಭದಲ್ಲಿ ಅವಕಾಶ ನೀಡಲಿಕ್ಕಿಲ್ಲ. ಹಾಗೊಂದು ವೇಳೆ ವಿದ್ಯಾರ್ಥಿಯು ಆಯ್ಕೆ ಮಾಡಿಕೊಂಡರೂ, ಅವನ ಆಯ್ಕೆಯು ಆ ಕ್ಷಣದ ಖುಷಿ ಮತ್ತು ಪೂರ್ವಗ್ರಹಗಳನ್ನು ಆಧರಿಸಿದ್ದಾಗಿರುತ್ತದೆ. ಹೀಗೆ ಮಾಡುವುದು ಸುಲಭತಮವೂ (easiest) ಹೌದು. ತಾನೇ ವಿಷಯವನ್ನು ಆಯ್ಕೆ ಮಾಡಿಕೊಂಡರೆ ಅದು ನಿರ್ದಿಷ್ಟ ಸಮಾಜದ ತಕ್ಷಣದ ಅವಶ್ಯಕತೆಗಳಿಗೆ ಅನುಗುಣವಾಗಿರುತ್ತದೆ. ಆದರೆ, ನಾವು ಅತ್ಯಂತ ಮೂಲಭೂತ ಸಂಗತಿಯ ಬಗ್ಗೆ ಕಾಳಜಿ ಹೊಂದಿದ್ದು, ಅದರ ವಿಕಸನದ ಬಗ್ಗೆ ಆಸಕ್ತರಾಗಿದ್ದಾಗ, ಅಧ್ಯಯನಕ್ಕೆ ಹಾಗೂ ತೇರ್ಗಡೆಗೆ ಸುಲಭತಮವೆನಿಸಿದ ವಿಷಯವನ್ನು ಆತನು ಆಯ್ಕೆ ಮಾಡದೇ, ತನ್ನ ಸಾಮರ್ಥ್ಯಗಳನ್ನು ಅವುಗಳ ಅತ್ಯುನ್ನತ ಮಟ್ಟಕ್ಕೆ ಮತ್ತು ಸಂಪೂರ್ಣವಾಗಿ ಹೇಗೆ ಅಭಿವ್ಯಕ್ತಿಸಬಹುದು ಎಂಬ ನಿಟ್ಟಿನಲ್ಲಿ, ಸ್ವಾಭಾವಿಕವಾಗಿ ವಿಷಯವನ್ನು ಆಯ್ಕೆ ಮಾಡುತ್ತಾನೆ. ನಾವು ಜೀವನದ ಹತ್ತು ಹಲವು ಸಂಗತಿಗಳನ್ನು ಅವುಗಳ ಮಾನಸಿಕ, ಬೌದ್ಧಿಕ ಮತ್ತು ಭಾವನಾತ್ಮಕ ಸಮಸ್ಯೆಗಳೊಂದಿಗೆ ಸಮಗ್ರವಾಗಿ ನಿರ್ವಹಿಸುವತ್ತ ಆಸಕ್ತರಾಗಿದ್ದೇವೆ. ಜೀವನವನ್ನು ಸಮಗ್ರವಾಗಿ ನೋಡಲು ಆರಂಭದಿಂದಲೇ ವಿದ್ಯಾರ್ಥಿಗೆ ಸಹಾಯವು ದೊರೆಯುವುದರಿಂದ, ಅವನು ಅದರ ಭಯಕ್ಕೆ ಒಳಗಾಗುವುದಿಲ್ಲ.

ಯಾವುದೇ ಸಮಸ್ಯೆಯೊಂದಿಗೆ ಇಡಿಯಾಗಿ ವ್ಯವಹರಿಸುವ ಸಾಮರ್ಥ್ಯವು ಅಂತಃಪ್ರಜ್ಞೆಯಾಗಿದೆ. ವಿದ್ಯಾರ್ಥಿಗೆ ಶ್ರೇಣಿಗಳು ಮತ್ತು ಅಂಕಗಳನ್ನು ಕೊಡುವುದು ಅಂತಃಪ್ರಜ್ಞೆಯನ್ನು ಬೆಳೆಸುವುದಿಲ್ಲ. ಬದಲಾಗಿ, ಅದು ಮಾನವನ ಗ್ರಹಣಶಕ್ತಿಯ ಘನತೆಗೆ ಕುಂದುತರುತ್ತದೆ. ಈ ತುಲನಾತ್ಮಕ ಮೌಲ್ಯಮಾಪನವು ಮನಸ್ಸನ್ನು ಮುದುಡಿಸುತ್ತದೆ. ಇದರರ್ಥ ಶಿಕ್ಷಕನು ಪ್ರತಿಯೊಬ್ಬ ವಿದ್ಯಾರ್ಥಿಯ ಪ್ರಗತಿಯನ್ನು ಗಮನಿಸುವುದಿಲ್ಲ ಮತ್ತು ಅದನ್ನು ದಾಖಲಿಸುವುದಿಲ್ಲ ಎಂದಲ್ಲ. ಪಾಲಕರು ಸಹಜವಾಗಿ ತಮ್ಮ ಮಕ್ಕಳ ಪ್ರಗತಿಯನ್ನು ತಿಳಿಯುವ ತವಕದಲ್ಲಿದ್ದು, ಅವರ ಕಲಿಕಾ ವರದಿಯನ್ನು ಬಯಸುತ್ತಾರೆ. ಆದರೆ ಅತ್ಯಂತ ದುರ್ದೈವದ ಸಂಗತಿ ಎಂದರೆ, ಶಿಕ್ಷಕನು ಏನು ಮಾಡಲು ಪ್ರಯತ್ನಿಸುತ್ತಿದ್ದಾನೆ ಎಂಬುದನ್ನು ಅವರು ಅರ್ಥಮಾಡಿಕೊಳ್ಳದೇ ಇರುವುದು. ಅವರು ವರದಿಯನ್ನು; ಮಮತೆಯಿಂದ ಹಾಗೂ ಬೆದರಿಸುವ ರೀತಿಯಲ್ಲಿ ತಾವು ಬಯಸಿದ ಫಲಿತಾಂಶವನ್ನು ಪಡೆಯುವ ನಿಟ್ಟಿನಲ್ಲಿ, ಒತ್ತಾಯದ ಸಾಧನವಾಗಿ ಬಳಸುತ್ತಾರೆ. ಹೀಗೆ ಅವರು ಶಿಕ್ಷಕನ ಪ್ರಯತ್ನವನ್ನು ನಿಷ್ಫಲಗೊಳಿಸುತ್ತಾರೆ. ನಾವು ಕೊಡಬಯಸುತ್ತಿರುವ ಶಿಕ್ಷಣವನ್ನು ಪಾಲಕರು ಅರ್ಥಮಾಡಿಕೊಳ್ಳಬೇಕು. ಸಾಮಾನ್ಯವಾಗಿ, ಅವರು ತಮ್ಮ ಮಕ್ಕಳು ಜೀವನೋಪಾಯಕ್ಕೆ ಖಾತರಿಯನ್ನು ನೀಡಬಲ್ಲ ಯಾವುದೋ ಒಂದು ಪದವಿ ಪಡೆದುಕೊಂಡರೆ ಸಾಕು ಎನ್ನುವುದರಲ್ಲಿ ತೃಪ್ತರಾಗುತ್ತಾರೆ. ಬೆರಳೆಣಿಕೆಯಷ್ಟು ಜನ ಮಾತ್ರ ಇದರಾಚೆಗೆ ಆಲೋಚಿಸಬಲ್ಲರು. ಪಾಲಕರು ತಮ್ಮ ಮಕ್ಕಳು `ಸಂತೋಷ' ಎಂದು

ಕರೆಯಲಾಗುತ್ತಿರುವುದನ್ನು ಪಡೆಯಬೇಕು ಎಂದು ಆಶಿಸುತ್ತಾರೆ, ನಿಜ. ಆದರೆ, ಈ ಅಸ್ಪಷ್ಟ ಆಸೆಗೆ ಅತೀತವಾಗಿ ಅವರ ಸಂಪೂರ್ಣ ವಿಕಸನದ ಕುರಿತಂತೆ ಕಾಳಜಿಯಿರುವ ಜನರು ಬಹಳ ಕಡಿಮೆ. ಬಹಳಷ್ಟು ಜನರು ತಮ್ಮ ಮಕ್ಕಳು ಯಶಸ್ವಿ ಉದ್ಯೋಗ ಪಡೆಯಬೇಕೆಂದು ಆಶಿಸುತ್ತಾರೆ. ಅದಕ್ಕಾಗಿ ಅವರು ತಮ್ಮ ಮಕ್ಕಳನ್ನು ಅಕ್ಕರೆಯಿಂದ ಅಂಜಿಸುತ್ತಾರೆ ಅಥವಾ ಪುಸ್ತಕದ ಜ್ಞಾನ ಗಳಿಸುವಂತೆ ಬೆದರಿಸುತ್ತಾರೆ ಹೀಗಾಗಿ ಇಲ್ಲಿ ಪುಸ್ತಕವೇ ಹೆಚ್ಚು ಮಹತ್ತ್ವದ್ದಾಗುತ್ತದೆ; ಅದರ ಹಿಂದಿರುವ ನಿಜವನ್ನು ಅರಿಯುವ ಗುಣವಿಲ್ಲದೇ ಕೇವಲ ಪುನರಾವರ್ತಿಸುವುದನ್ನು, ನೆನಪಿಟ್ಟುಕೊಳ್ಳುವುದನ್ನು ಮಾತ್ರ ಬೆಳಸಲು ಸಾಧ್ಯವಾಗುತ್ತದೆ.

ನಮ್ಮ ಶಿಕ್ಷಕ ಎದುರಿಸಬೇಕಾಗಿರುವ ತೊಡಕೆಂದರೆ, ವಿಸ್ತೃತ ಹಾಗೂ ಆಳವಾದ ಶಿಕ್ಷಣದ ಬಗೆಗೆ ಪಾಲಕರಿಗೆ ಇರುವ ದಿವ್ಯ ನಿರ್ಲಕ್ಷ್ಯ. ಅವರಿಗೆ ಬೇಕಿರುವುದು ಈ ಭ್ರಷ್ಟ ಸಮಾಜದಲ್ಲಿ ತಮ್ಮ ಮಗುವು ಗೌರವಾನ್ವಿತ ಸ್ಥಾನಮಾನ ಪಡೆದುಕೊಳ್ಳಲು ಪೂರಕವಾಗಿರುವ, ಆಳವಿಲ್ಲದ ತೋರಿಕೆಯ ಜ್ಞಾನದ ಕೃಷಿ ಮಾತ್ರ.

ಆದುದರಿಂದ, ಶಿಕ್ಷಕನು ಸರಿಯಾದ ದಾರಿಯಲ್ಲಿ ಕೇವಲ ಮಕ್ಕಳನ್ನು ಮಾತ್ರ ಶಿಕ್ಷಿತರನ್ನಾಗಿ ಮಾಡುವುದಲ್ಲ, ಶಾಲೆಯಲ್ಲಿ ಮಾಡಿರುವ ಯಾವ ಪ್ರಯತ್ನವನ್ನೇ ಆಗಲೀ ಪಾಲಕರು ನಿಷ್ಫಲಗೊಳಿಸದಂತೆಯೂ ನೋಡಿಕೊಳ್ಳಬೇಕಾಗುತ್ತದೆ. ಪಾಲಕರು ಬಯಸುವುದು ಒಂದು, ಶಿಕ್ಷಕ ಮಾಡುತ್ತಿರುವುದು ಅದಕ್ಕೆ ಸಂಪೂರ್ಣವಾಗಿ ಭಿನ್ನವಾಗಿರುವ ಮತ್ತೊಂದು – ಹೀಗೆ ಇವೆರಡೂ ಪರಸ್ಪರ ವಿರುದ್ಧವಾಗಿರದೇ, ವಾಸ್ತವವಾಗಿ ಶಾಲೆ ಮತ್ತು ಮನೆ ಎರಡೂ ನೈಜ ಶಿಕ್ಷಣದ ಕೇಂದ್ರಗಳಾಗಬೇಕಾಗುತ್ತದೆ. ಶಿಕ್ಷಕನು ಏನು ಮಾಡುತ್ತಿದ್ದಾನೆ ಎಂಬುದರ ಬಗೆಗೆ ಪಾಲಕರು ಸಂಪೂರ್ಣವಾಗಿ ಅರಿವುಳ್ಳವರಾಗಿದ್ದು, ತಮ್ಮ ಮಕ್ಕಳ ಸಮಗ್ರ ವಿಕಸನದ ಬಗ್ಗೆ ಅತ್ಯಾವಶ್ಯಕ ಕಳಕಳಿಯನ್ನು ಹೊಂದಿರುವುದು ಅವಶ್ಯ. ಈ ರೀತಿಯ ಶಿಕ್ಷಣದ ಜವಾಬ್ದಾರಿಯನ್ನು ಈಗಾಗಲೇ ಸಾಕಷ್ಟು ಹೊರೆಯನ್ನು ಹೊತ್ತಿರುವ ಶಿಕ್ಷಕರ ಮೇಲಷ್ಟೇ ಹೊರಿಸದೇ, ಪಾಲಕರು ಕೂಡ ಸಮಾನ ಹೊಣೆಗಾರಿಕೆಯನ್ನು ನಿಭಾಯಿಸತಕ್ಕದ್ದು. `ಶಿಕ್ಷಕ, ವಿದ್ಯಾರ್ಥಿ ಹಾಗೂ ಪಾಲಕರ ನಡುವೆ ಯುಕ್ತ ರೀತಿಯ ಸಂಬಂಧವಿದ್ದಲ್ಲಿ ಮಾತ್ರವೇ ಈ ಸಂಪೂರ್ಣ ಬೆಳವಣಿಗೆಯು ಸಾಧ್ಯವಾಗುತ್ತದೆ. ಶಿಕ್ಷಕನು ಯಾವುದೇ ಸನ್ನಿವೇಶದಲ್ಲಿ ಪಾಲಕರ ಭ್ರಾಂತಿಗಳಿಗೆ ಅಥವಾ ಹಠಮಾರಿ ಬೇಡಿಕೆಗಳಿಗೆ ಪಕ್ಕಾಗದೇ ಇರುವುದರಿಂದ, ಶಿಕ್ಷಕನು ಏನು ಮಾಡುತ್ತಿದ್ದಾನೆಂಬುದನ್ನು ಪಾಲಕರು ಅರ್ಥಮಾಡಿಕೊಳ್ಳುವುದು ಮತ್ತು ತಮ್ಮ ಮಕ್ಕಳಲ್ಲಿ ಗೊಂದಲ ಮತ್ತು ಸಂಘರ್ಷಗಳನ್ನು ಉಂಟುಮಾಡದೇ ಇರುವುದು ತುಂಬ ಅಗತ್ಯವಾಗಿರುತ್ತದೆ.

ಮಗುವಿನಲ್ಲಿ ಪ್ರಾರಂಭದಿಂದಲೇ ಸಹಜ ಕುತೂಹಲ ಮತ್ತು ಕಲಿಯುವ ಹಂಬಲ ಖಂಡಿತವಾಗಿಯೂ ಇರುತ್ತದೆ. ಇದನ್ನು ಬುದ್ಧಿವಂತಿಕೆಯಿಂದ ಪ್ರೋತ್ಸಾಹಿಸಬೇಕು. ಹೀಗೆ ಮಾಡುವುದರಿಂದ ಮಗು ಬೆಳೆಯುತ್ತ ಹೋದಂತೆ ಯಾವುದೇ ವಿರೂಪಣೆಗಳಿಲ್ಲದೆ (distortion) ಈ ಹಂಬಲವು ಹೆಚ್ಚು ಮಹತ್ವದ್ದೆನಿಸಿ, ವಿವಿಧ ವಿಷಯಗಳ ಅಧ್ಯಯನದತ್ತ ಕೊಂಡೊಯ್ಯುತ್ತದೆ. ಈ ಕುತೂಹಲವನ್ನು ಸದಾಕಾಲ ಉತ್ತೇಜಿಸಿದಲ್ಲಿ, ಗಣಿತ, ಭೂಗೋಲಶಾಸ್ತ್ರ, ಇತಿಹಾಸ, ವಿಜ್ಞಾನ ಅಥವಾ ಜೀವಶಾಸ್ತ್ರ, ಮಗುವಿಗೆ ಅಥವಾ ಶಿಕ್ಷಕನಿಗೆ ಸಮಸ್ಯೆಯಾಗುವುದಿಲ್ಲ. ವಿವೇಕಯುತ ಪ್ರೀತಿ ಮತ್ತು ಸಂತೋಷದಾಯಕ ಕಾಳಜಿಯುಳ್ಳ ವಾತಾವರಣವಿದ್ದಾಗ ಕಲಿಕೆಯು ಸುಗಮವಾಗುತ್ತದೆ.

ಶಿಕ್ಷಕರೊಂದಿಗಿನ ಸಂಬಂಧದಲ್ಲಿ ತಾನು ಸುರಕ್ಷಿತನಾಗಿದ್ದೇನೆ ಎಂದು ವಿದ್ಯಾರ್ಥಿಗೆ ಅನಿಸಿದಾಗ ಮಾತ್ರ ಆತನಲ್ಲಿ ಭಾವನಾತ್ಮಕ ಸಂವೇದನೆಗಳನ್ನು ಬೆಳೆಸಲು ಸಾಧ್ಯವಾಗುತ್ತದೆ. ಸಂಬಂಧದಲ್ಲಿ ತಾನು ಸುರಕ್ಷಿತವಾಗಿದ್ದೇನೆ ಎಂಬ ಅನಿಸಿಕೆಯು ಮಕ್ಕಳ ಮೂಲಭೂತವಾದ ಅಗತ್ಯ. ತಾನು ಸುರಕ್ಷಿತವಾಗಿದ್ದೇನೆ ಎಂಬ ಅನಿಸಿಕೆಗೂ ಅವಲಂಬನೆಗೂ ತುಂಬಾ ವ್ಯತ್ಯಾಸವಿದೆ. ಬಹಳಷ್ಟು ಶಿಕ್ಷಕರು, ಪ್ರಜ್ಞಾಪೂರ್ವಕವಾಗಿಯೋ ಅಥವಾ

ಅಪ್ರಜ್ಞಾಪೂರ್ವಕವಾಗಿಯೋ ಅವಲಂಬನೆಯ ಭಾವನೆಯನ್ನು ಬೆಳೆಸುತ್ತಾರೆ; ಸೂಕ್ಷ್ಮವಾಗಿ ಭಯವನ್ನು ಉತ್ತೇಜಿಸುತ್ತಾರೆ; ಪಾಲಕರೂ ತಮ್ಮದೇ ಆದ ಪ್ರೀತಿಪೂರ್ವಕ ಅಥವಾ ಆಕ್ರಮಣಕಾರಿ ರೀತಿಯಲ್ಲಿ ಇದರಲ್ಲಿ ತೊಡಗಿರುತ್ತಾರೆ. ಈ ಅವಲಂಬನೆಯು ಮಗು ಏನು ಆಗಬೇಕು ಅಥವಾ ಮಾಡಬೇಕು ಎಂಬುದನ್ನು ಅದರ ಮೇಲೆ ಹೇರುವ ನಿರಂಕುಶ ಅಥವಾ ತರ್ಕದಿಂದ ನಿರ್ಣಯಿಸದ ಸಮರ್ಥನೆಗಳಾಗಿ ಪ್ರಕಟಗೊಳ್ಳುತ್ತದೆ. ಅವಲಂಬನೆಯ ಜೊತೆಜೊತೆಗೆ ಭಯದ ನೆರಳು ಸದಾ ಇದ್ದೇ ಇರುತ್ತದೆ. ಈ ಭಯವು ಮಗುವು ವಿಧೇಯನಾಗಿರುವಂತೆ, ಹಿರಿಯರ ಆದೇಶಗಳು ಮತ್ತು ನಿರ್ಬಂಧನೆಗಳನ್ನು ಅನುಸರಿಸುವಂತೆ, ಒಪ್ಪಿಕೊಳ್ಳುವಂತೆ ಒತ್ತಾಯಿಸುತ್ತದೆ. ಈ ಬಗೆಯ ಅವಲಂಬನೆಯ ವಾತಾವರಣದಲ್ಲಿ ಭಾವನಾತ್ಮಕ ಸಂವೇದನೆಗಳು ತುಳಿಯಲ್ಪಟ್ಟು ಅವು ಎಂದೂ ಬೆಳೆಯದಂತಾಗುತ್ತದೆ. ಆದರೆ, ತಾನು ಸುರಕ್ಷಿತವಾಗಿದ್ದೇನೆ ಎಂದು ಮಗುವಿಗೆ ಅನಿಸಿದಾಗ ಭಾವನಾತ್ಮಕ ವಿಕಸನಕ್ಕೆ ಅಭದ್ರತೆಯ ಭಯವು ತಡೆಯೊಡ್ಡುವುದಿಲ್ಲ. ಈ ಸುರಕ್ಷತೆಯು ಅಸುರಕ್ಷತೆಗೆ ವಿರುದ್ಧವಾದುದಲ್ಲ. ಸುರಕ್ಷತೆ ಎಂದರೆ ಶಾಲೆಯು ಮನೆಯಂತೆಯೇ ಭಾಸವಾಗುವಿಕೆ. ಅಂದರೆ, ಶಾಲೆಯನ್ನು ಸಹ ಮಗುವು ಯಾವ ಮನೆಯಿಂದ ಬಂದಿದೆಯೋ ಆ ಮನೆಯಂತೆಯೇ ಭಾವಿಸುವುದು ಎಂಬರ್ಥದಲ್ಲಿ ಅಲ್ಲ, ಬದಲಾಗಿ ತಾನು ಏನಿರುವೆನೋ ಅದರಂತಿರಲು ಆಸ್ಪದವಿರುವ ಮನೆ. ಹೀಗೆಯೇ ಇರು ಅಥವಾ ಇರಬೇಡ ಎಂಬ ಒತ್ತಾಯಗಳಿಲ್ಲದ, ಮರ ಹತ್ತುವ, ಮರದಿಂದ ಬಿದ್ದಲ್ಲಿ, ಬೈಗುಳವಿಲ್ಲದ, ಶಿಕ್ಷಕ ಅಥವಾ ಗೃಹಮಾತೆ (house mother) ಅಥವಾ ಗೃಹಪಿತ (house father) ಮಗುವಿನ ಸಂಪೂರ್ಣಕ್ಷೇಮದ ಬಗ್ಗೆ ಆಳವಾದ ಕಾಳಜಿಯನ್ನು ಹೊಂದಿದ್ದು, ಮೊದಲ ಸಲವೇ ಮಗುವು ಇದರ ಪ್ರಭಾವವನ್ನು ಅನುಭವಿಸುವಂತಹ ಪರಿಸರ.

ತಾನು ಮನೆಯಲ್ಲಿ ಇದ್ದೇನೆ, ಸಂಪೂರ್ಣವಾಗಿ ಸುರಕ್ಷಿತವಾಗಿದ್ದೇನೆ ಎಂಬುದಾಗಿ ಶಾಲೆಯ ಮೊದಲ ಅನುಭವದಲ್ಲೇ ಮಗುವಿಗೆ ಭಾಸವಾಗಬೇಕೇ ಹೊರತು, ಕೆಲವು ವಾರಗಳ ಅಥವಾ ತಿಂಗಳುಗಳ ಬಳಿಕವಲ್ಲ ಎಂಬುದು ಮಹತ್ವದ ವಿಷಯ. ಮೊಟ್ಟಮೊದಲ ಪ್ರಭಾವವು ಅತ್ಯಂತ ಮುಖ್ಯವಾದುದು. ಆದರೆ, ಶಿಕ್ಷಕನು ಮಗುವಿನ ವಿಶ್ವಾಸ ಗಳಿಸಲು ನಾನಾ ಮಾರ್ಗಗಳನ್ನು ಅನುಸರಿಸಿದಲ್ಲಿ ಹಾಗೂ ಮಗುವು ತನಗೆ ಇಷ್ಟವಾದುದನ್ನು ಮಾಡಲು ಅವಕಾಶ ನೀಡಿದಲ್ಲಿ, ಶಿಕ್ಷಕನು ಅವಲಂಬನೆಯ ಭಾವವನ್ನು ಮೂಡಿಸುತ್ತಿದ್ದಾನೆಯೇ ಹೊರತು ತಾನು ಸುರಕ್ಷಿತವಾಗಿದ್ದೇನೆ, ತನ್ನ ಕ್ಷೇಮದ ಬಗೆಗೆ ಆಳವಾದ ಕಾಳಜಿ ಹೊಂದಿರುವ ಜನರು ಇರುವ ಮನೆಯಲ್ಲಿ ತಾನಿದ್ದೇನೆ ಎಂಬ ಭಾವವನ್ನು ಮಗುವಿನಲ್ಲಿ ಮೂಡಿಸುವುದಿಲ್ಲ. ಮಗುವು ಈ ಮೊದಲು ಅನುಭವಿಸಿರದ ಈ ಹೊಸ ಸಂಬಂಧದ ಮೊದಲ ಪರಿಣಾಮವು ಮಗುವಿನಲ್ಲಿ ಒಂದು ಸಹಜ ಸಂವಹನವವನ್ನು ಉಂಟುಮಾಡಿ, ಹಿರಿಯರನ್ನು ಭೀತಿಯಿಂದ ಕಾಣದೇ; ಅವರು, ತಾನು ಗೌರವಿಸತಕ್ಕವರು ಎಂಬ ಭಾವವನ್ನು ಬೆಳೆಸುತ್ತದೆ. ತಾನು ಸುರಕ್ಷಿತ ಎಂದು ಭಾವಿಸುವ ಮಗುವು ಕಲಿಕೆಯಲ್ಲಿ ಅತ್ಯಗತ್ಯವಾಗಿರುವ ಗೌರವವನ್ನು ಅಭಿವ್ಯಕ್ತಿಸಲು ತನ್ನದೇ ಆದ ದಾರಿಗಳನ್ನು ಹೊಂದಿರುತ್ತದೆ. ಈ ಗೌರವವು ಎಲ್ಲ ಅಧಿಕಾರ ಮತ್ತು ಭಯಗಳಿಂದ ಮುಕ್ತವಾಗಿರುತ್ತದೆ. ಈ ಸುರಕ್ಷಿತ ಭಾವದಲ್ಲಿ ನಡವಳಿಕೆ ಮತ್ತು ವರ್ತನೆಗಳು ಹಿರಿಯರಿಂದ ಹೇರಿದವುಗಳಾಗಿರದೇ, ಕಲಿಯುವ ಪ್ರಕ್ರಿಯೆಯಾಗುತ್ತವೆ. ಮಗುವು ಶಿಕ್ಷಕನೊಂದಿಗೆ, ಹಿರಿಯರೊಂದಿಗೆ ಸುರಕ್ಷಿತವಾಗಿರುವುದರಿಂದ ಸಹಜವಾಗಿಯೇ ತಾನೂ ವಿಚಾರಶೀಲ ವ್ಯಕ್ತಿಯಾಗುತ್ತದೆ. ಈ ಬಗೆಯ ಸುರಕ್ಷಿತ ವಾತಾವರಣದಲ್ಲಿ ಮಾತ್ರ ಭಾವನಾತ್ಮಕ ಸಂವೇದನೆಗಳ ವಿಕಸನವು ಸಾಧ್ಯವಾಗಬಲ್ಲದು. ಮನೆಯಲ್ಲಿರುವಂತೆ ಹಾಗೂ ಸುರಕ್ಷಿತವಾಗಿರುವಂತೆ ಭಾಸವಾಗುವ ವಾತಾವರಣದಲ್ಲಿರುವ ಮಗುವು, ತನಗಿಷ್ಟವಾದುದನ್ನು ಮಾಡುತ್ತದೆ, ಹೀಗೆ ತನಗಿಷ್ಟವಾದುದುದನ್ನು ಮಾಡುವಲ್ಲಿ, ಯಾವುದು ಸರಿಯಾದುದು ಎಂಬುದನ್ನು ಕಂಡುಕೊಳ್ಳುವುದನ್ನೂ ಕಲಿಯುತ್ತದೆ. ಇದು ಪ್ರತಿರೋಧ ಅಥವಾ ಹಠಮಾರಿತನ ಅಥವಾ

ಹತ್ತಿಕ್ಕಲ್ಪಟ್ಟ ಭಾವನೆಗಳ, ಇಲ್ಲವೇ ಆ ಕ್ಷಣದ ತುರ್ತಿಗೆ ಪ್ರತಿಕ್ರಿಯಿಸುವ ನಿಟ್ಟಿನ ಕ್ರಿಯೆಯ ಫಲಿತಾಂಶವಲ್ಲ.

ಸಂವೇದನಾಶೀಲನಾಗಿರುವುದು ಎಂದರೆ ಸಸ್ಯಗಳು, ಪ್ರಾಣಿಗಳು, ಮರಗಿಡಗಳು, ಆಕಾಶ, ನೀರು, ಅಥವಾ ಹಾರುತ್ತಿರುವ ಹಕ್ಕಿ, ತನ್ನ ಹಾಗೂ ಜನರ ಮನಸ್ಥಿತಿಗಳು, ಹಾದು ಹೋಗುತ್ತಿರುವ ಅಪರಿಚಿತನ ಭಾವನೆಗಳು - ಹೀಗೆ ಎಲ್ಲವುಗಳ ಬಗ್ಗೆಯೂ ಸಂವೇದನಾಶೀಲನಾಗಿರುವುದು. ಈ ಸಂವೇದನೆಯು ಲೆಕ್ಕಾಚಾರವಿಲ್ಲದ, ನಿಸ್ವಾರ್ಥ ಪ್ರತಿಕ್ರಿಯೆಯ ವಿಶಿಷ್ಟ ಗುಣವನ್ನು ತರುತ್ತದೆ. ಇದು ನಿಜವಾದ ನೈತಿಕತೆ ಹಾಗೂ ನಡವಳಿಕೆ ಆಗಿರುತ್ತದೆ. ಆದ್ದರಿಂದ ವಿದ್ಯಾರ್ಥಿಯ ನಡವಳಿಕೆಯು ಮುಕ್ತವಾಗಿರುತ್ತದೆಯೇ ವಿನಃ ರಹಸ್ಯವಾಗಿರುವುದಿಲ್ಲ; ಮುಕ್ತವಾಗಿರುವುದರಿಂದ, ಶಿಕ್ಷಕನ ಒಂದು ಚಿಕ್ಕ ಸಲಹೆ ಕೂಡ ಯಾವುದೇ ಪ್ರತಿರೋಧ ಮತ್ತು ಘರ್ಷಣೆ ಇಲ್ಲದೇ ಮಗುವಿನಿಂದ ಸ್ವೀಕೃತವಾಗುತ್ತದೆ.

ಮಾನವನ ಸಮಗ್ರ ಬೆಳವಣಿಗೆ ಮತ್ತು ಬೌದ್ಧಿಕ ತಾರ್ಕಿಕತೆಗಿಂತ ಹೆಚ್ಚು ಶಕ್ತಿಯುತವಾಗಿರುವ ಆತನ ಭಾವನಾತ್ಮಕ ತೀವ್ರ ಅಪೇಕ್ಷೆಗಳು ನಮ್ಮ ಕಾಳಜಿಯಾಗಿರುವುದರಿಂದ, ನಾವು ಭಾವನಾತ್ಮಕ ಸಾಮರ್ಥ್ಯವನ್ನು ಬೆಳೆಸತಕ್ಕದ್ದೇ ವಿನಃ ಅದನ್ನು ಹತ್ತಿಕ್ಕಲು ಯತ್ನಿಸುವುದಲ್ಲ. ತನ್ನ ಭಾವನಾತ್ಮಕ ಮತ್ತು ಬೌದ್ಧಿಕ ಸಂಗತಿಗಳನ್ನು ನಿಭಾಯಿಸಿದಲ್ಲಿ, ಅವುಗಳ ಸಮೀಪ ಗಮನದಲ್ಲಿ (approaching) ಭಯದ ಭಾವನೆ ಇರುವುದಿಲ್ಲ.

ಮಾನವನ ಸಮಗ್ರ ಬೆಳವಣಿಗೆ ನಮ್ಮ ಕಾಳಜಿಯಾಗಿರುವುದರಿಂದ ಸಂವೇದನಶೀಲತೆಯ ಸೃಜನೆಯ ಸಾಧನವಾಗಿ, ಏಕಾಂತವು ಅವಶ್ಯವಾಗುತ್ತದೆ. ಗಣಿತವನ್ನು ಕಲಿಯುವುದು ಅಗತ್ಯವಾಗಿರುವಂತೆ, ಏಕಾಂತ, ಧ್ಯಾನ ಹಾಗೂ ಸಾವು ಎಂದರೇನು? ಯಾವುದು ಏಕಾಂತವಲ್ಲ, ಯಾವುದು ಧ್ಯಾನವಲ್ಲ ಎಂಬುದನ್ನು ತಿಳಿಯುವುದೂ ಅಷ್ಟೇ ಮುಖ್ಯವಾಗುತ್ತದೆ. ಇದು ಹುಡುಕಿದರೆ ಮಾತ್ರ ಅರಿವಾಗುವಂಥದು. ಆದುದರಿಂದ ಧ್ಯಾನ, ಏಕಾಂತ, ಸಾವು ಇವುಗಳ ಪರಿಣಾಮಗಳು ಏನು ಎಂಬುದರ ಕಲಿಕೆ ಆಗಲೇಬೇಕು. ಈ ಅಂತರಾರ್ಥಗಳನ್ನು ಕಲಿಸಲು ಆಗುವುದಿಲ್ಲ, ಆದರೆ ಕಲಿಯಬೇಕು ಅಷ್ಟೇ. ಈ ಕುರಿತು ಸೂಚಿಸಬಹುದು; ಆದರೆ ಸೂಚನೆಗಳ ಮೂಲಕ ಕಲಿಯುವುದು ಏಕಾಂತವೂ ಅಲ್ಲ, ಧ್ಯಾನವೂ ಅಲ್ಲ. ಆದರೆ, ನೀವು ಗಣಿತವನ್ನು ಕಲಿತಂತೆ; ಏಕಾಂತ ಹಾಗೂ ಧ್ಯಾನವೆಂದರೇನೆಂಬುದನ್ನು ಕಲಿಯಲು ಶೋಧನೆಯು ಅತ್ಯಗತ್ಯ. ಈ ಶೋಧನೆಯು ಖಂಡಿತವಾಗಿಯೂ ಕಲಿಕೆಗೆದಾರಿ. ಶೋಧನಾ ಸಾಮರ್ಥ್ಯವುಳ್ಳ ಮನಸ್ಸು ಕಲಿಯುವ ಸಾಮರ್ಥ್ಯವನ್ನು ಪಡೆದಿರುತ್ತದೆ. ಆದರೆ, ಯಾವಾಗ ಉನ್ನತ ಜ್ಞಾನ ಅಥವಾ ಉನ್ನತ ಅಧಿಕಾರ ಮತ್ತು ಅನುಭವದಿಂದ ಶೋಧನೆಯು ಹತ್ತಿಕಲ್ಪಡುತ್ತದೆಯೋ ಆಗ ಕಲಿಕೆಯು ಅನುಕರಣೆಯಾಗುತ್ತದೆ. ಅನುಕರಣೆಯು ಕಲಿಕೆಯ ಅನುಭವವಿಲ್ಲದೆ ಪುನರಾವರ್ತನೆ ಮಾಡುವ ಮನುಷ್ಯ ಯಂತ್ರವನ್ನು ಉತ್ಪಾದಿಸುತ್ತದೆ ಅಷ್ಟೇ.

ಕಲಿಸುವುದು ಎಂದರೆ ಕೇವಲ ಮಾಹಿತಿಯ ಪೂರೈಕೆಯಲ್ಲ. ಸ್ಥಾಪಿತ ಧರ್ಮಗಳು, ಧಾರ್ಮಿಕ ವ್ಯವಸ್ಥೆಗಳು ಮತ್ತು ಆಚರಣೆಗಳನ್ನು ಸುಖಾಸುಮ್ಮನೇ ಒಪ್ಪಿಕೊಳ್ಳದೇ, ಧರ್ಮ ಎಂದರೆ ಏನು ಎಂಬ ಪ್ರಶ್ನೆಯ ಒಳಹೊಕ್ಕು ನೋಡುವ ಅಂತಶ್ಶೋಧನಾ ಮನಸ್ಸನ್ನು ಬೆಳೆಸುವುದು ಎಂದರ್ಥ. ದೇವರು, ಸತ್ಯ ಅಥವಾ ಬೇರಿನ್ನಾವುದೇ ಹೆಸರಿನಿಂದ ಕರೆಯಲ್ಪಡುವ ಇವುಗಳನ್ನು ಶೋಧನೆ ಮಾಡುವುದು ನಿಜವಾದ ಧರ್ಮವೇ ವಿನಃ, ಕೇವಲ ನಂಬಿಕೆ ಮತ್ತು ಮತ ತತ್ತ್ವವನ್ನು ಸುಖಾಸುಮ್ಮನೆ ಒಪ್ಪುವುದಲ್ಲ. ವಿದ್ಯಾರ್ಥಿಯ ಪ್ರತಿದಿನದ ಹಲ್ಲುಜ್ಜಿಕೊಳ್ಳುವ, ಸ್ನಾನಮಾಡುವ ಹಾಗೂ ದಿನದ ಪ್ರತಿಕ್ಷಣದ ಕಲಿಕೆಯ ಕ್ರಿಯೆಯಂತೆ, ಬೇರೆಯವರೊಂದಿಗೋ ಅಥವಾ ತಾನೊಬ್ಬನೆಯೋ ಏಕಾಂತದಲ್ಲಿ ಕುಳಿತುಕೊಳ್ಳುವ ಕ್ರಿಯೆಯೂ ಅವಶ್ಯ. ಆದರೆ ಮೌನವಾಗಿ ಏಕಾಂತದಲ್ಲಿ ಕುಳಿತುಕೊಳ್ಳುವುದು ಬೇಸರದಿಂದ

ಅಥವಾ ನಿತ್ಯದ ಚಟುವಟಿಕೆಯಿಂದ ಪಲಾಯನ ಮಾಡುವ ದಾರಿಯಾಗಬಾರದು. ಏಕಾಂತವು ಅಸಾಮಾನ್ಯ ಸಂಗತಿಯಾಗಿರದೆ, ನಿತ್ಯಜೀವನದ ಸಹಜಭಾಗವಾಗಬೇಕು. ನಿರ್ದೇಶನ ಅಥವಾ ಸಂಪ್ರದಾಯದ ಬಾಹ್ಯಗೋಚರ ಅಧಿಕಾರದಿಂದ ಹೇರಲ್ಪಡದ, ಮೌನವಾಗಿ ಕುಳಿತುಕೊಳ್ಳಲು ಬಯಸಿದಾಗ್ಯೂ, ಇಲ್ಲವೇ ಏಕಾಂತದಲ್ಲಿರಲು ಸಾಧ್ಯವಾಗದ ಜನರಿಂದ ಪ್ರೇರಿತವಾಗಿರದ ಈ ಏಕಾಂತದಲ್ಲಿ, ವಿದ್ಯಾರ್ಥಿಯು; ಕೇವಲ ಅರ್ಜನಶೀಲವಲ್ಲದ (acquistive), ಸ್ವ-ಮಾಪನವಲ್ಲದ, ಸ್ವ-ಕೇಂದ್ರಿತವಲ್ಲದ, ಜೀವನ ಸಂಬಂಧಿತ ಜ್ಞಾನವೆಂದು ತಾನು ಸಂಗ್ರಹಿಸುತ್ತ ಬಂದಿರುವುದರೆಲ್ಲದರ ಪರಿಣಾಮಗಳನ್ನು ಗಮನಿಸುವುದನ್ನು ಕಲಿಯುತ್ತಾನೆ. ಕನ್ನಡಿಯಲ್ಲಿ ಸ್ಪಷ್ಟವಾಗಿ ನೋಡಿಕೊಳ್ಳಲು ಸಾಧ್ಯವಾಗುವಂತೆ, ಮನಸ್ಸನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಲು ಮತ್ತುಸ್ವ-ಕೇಂದ್ರಿತಚಟುವಟಿಕೆಯ ಅಭಿವ್ಯಕ್ತಿಗಳಾದ ಭಯ ಮತ್ತು ಹತಾಶೆಗಳ ಸಂಕೀರ್ಣತೆಗಳನ್ನೊಳಗೊಂಡ ಮಹತ್ವಾಕಾಂಕ್ಷೆಯ ವ್ಯರ್ಥ ಪ್ರಯತ್ನಗಳಿಂದ ಮನಸ್ಸು ಸ್ವತಃ ಬಿಡುಗಡೆ ಹೊಂದಲು ಈ ಏಕಾಂತವು ಸಹಾಯಮಾಡುತ್ತದೆ. ಈ ಏಕಾಂತವು ಕಾಲದಿಂದ ಅಳೆಯಲು ಆಗದಂಥ ದೃಢವಿಶ್ವಾಸ, ಸ್ಥಿರತೆಯನ್ನು ಮನಸ್ಸಿಗೆ ತಂದುಕೊಡುತ್ತದೆ. ಮನಸ್ಸಿನ ಈ ಸ್ಪಷ್ಟತೆಯೇ ಸ್ವಭಾವ. ಈ ಸ್ವಭಾವದ ಕೊರತೆಯು ಸ್ವ-ವಿರೋಧದ (self-contradiction) ಸ್ಥಿತಿಯಾಗಿರುತ್ತದೆ.

ಸಂವೇದನಾಶೀಲವಾಗಿರುವುದು ಎಂದರೆ ಪ್ರೀತಿಸುವುದು ಎಂದರ್ಥ. ಪ್ರೀತಿ ಎಂಬ ಪದವು ಪ್ರೀತಿಯಲ್ಲ. ದೇವರ ಪ್ರೀತಿ ಮನುಷ್ಯನ ಪ್ರೀತಿ ಎಂದು ಪ್ರೀತಿಯನ್ನು ವಿಂಗಡಿಸಲಾಗದು. ಒಬ್ಬರ ಪ್ರೀತಿ ಅಥವಾ ಅನೇಕರ ಪ್ರೀತಿ ಎಂದು ಅದನ್ನು ಅಳೆಯಲಾಗದು. ತನ್ನನ್ನು ತುಟಿಗಳ ಹತ್ತಿರಕೊಂಡೊಯ್ಯುವಯಾರಿಗೇ ಆಗಲೀ ಹೂವು ಮೃದುತ್ವದ ಅನುಭವ ಕೊಡುವಂತೆ, ಪ್ರೀತಿಯು ಅಗಾಧವಾದುದನ್ನು ಕೊಡುವ ಸಾಮರ್ಥ್ಯವಾಗಿದೆ. ಆದರೆ ನಾವದನ್ನು ನಮ್ಮ ಸಂಬಂಧಗಳಲ್ಲಿ ಸದಾ ಅಳೆಯುತ್ತಿದ್ದು, ಹಾಗೆ ಮಾಡುವ ಮೂಲಕ ಅದನ್ನು ಹಾಳುಮಾಡುತ್ತೇವೆ. ಪ್ರೀತಿಯು ಸಮಾಜ ಸುಧಾರಕನ ಮತ್ತು ಸಮಾಜ ಸೇವಕನ ಸರಕಲ್ಲ. ಕ್ರಿಯೆಯನ್ನು ಸೃಜಿಸುವ ರಾಜಕೀಯ ಸಾಧನವಲ್ಲ. ರಾಜಕಾರಣಿ ಮತ್ತು ಸುಧಾರಕನು ಅದನ್ನು ಉಪಯೋಗಿಸಿದಾಗ, ಅವರು ಆ ಪದವನ್ನು ಉಪಯೋಗಿಸುತ್ತಾರೆಯೇ ವಿನಃ ಅವರೆಂದೂ ಅದರ ನಿಜತ್ವವನ್ನು ಸ್ಪರ್ಷಿಸಲಾರರು. ಏಕೆಂದರೆ ಪ್ರೀತಿಯನ್ನು ತಕ್ಷಣದ ಅಥವಾ ದೂರದ ಗುರಿ ಸಾಧನೆಯ ಸಾಧನವನ್ನಾಗಿ ಉಪಯೋಗಿಸಲು ಸಾಧ್ಯವಿಲ್ಲ. ಇದು ಭೂಮಿಯ ಪ್ರೀತಿ; ಅದರಲ್ಲಿನ ನಿರ್ದಿಷ್ಟ ಕ್ಷೇತ್ರದ ಪ್ರೀತಿಯಲ್ಲ. ಸತ್ಯದ ಪ್ರೀತಿಯು ಯಾವುದೇ ಧರ್ಮದ ಮಿತಿಯಲ್ಲಿಲ್ಲ. ಸಂಘಟಿತ ಧರ್ಮಗಳು ಅದನ್ನು ಉಪಯೋಗಿಸಿದಾಗ ಅದು ಇಲ್ಲವಾಗುತ್ತದೆ. ವಿವಿಧ ಚಟುವಟಿಕೆಗಳಲ್ಲಿ ದೃಢಪ್ರಯತ್ನದಿಂದ ತೊಡಗಿಕೊಂಡಿರುವ ಸಮಾಜ, ಸಂಘಟಿತ ಧರ್ಮ ಮತ್ತು ಸರ್ವಾಧಿಕಾರಿ ಸರಕಾರಗಳು ಕ್ರಿಯೆಯಲ್ಲಿನ ಉದ್ವೇಗವಾಗಿ ಪರಿವರ್ತಿತಗೊಳ್ಳುವ ಪ್ರೀತಿಯನ್ನು ತಮಗರಿವಿಲ್ಲದಂತೆಯೇ ನಾಶಮಾಡುತ್ತವೆ.

ಸೂಕ್ತ ಶಿಕ್ಷಣದ ಮೂಲಕ ಮಾನವನ ಸಮಗ್ರ ಬೆಳವಣಿಗೆಯು ನಮ್ಮ ಕಾಳಜಿಯಾಗಿರುವುದರಿಂದ, ಪ್ರೀತಿಯ ಮೌಲ್ಯವನ್ನು ಆರಂಭದಿಂದಲೇ ಪೋಷಿಸಿ, ಸುಸ್ಥಿರಗೊಳಿಸತಕ್ಕದ್ದು.. ಪ್ರೀತಿಯು ಭಾವುಕತೆಯಾಗಲೀ ಭಕ್ತಿಯಾಗಲೀ ಅಲ್ಲ. ಅದು ಸಾವಿನಷ್ಟೇ ಶಕ್ತಿಯುತ; ಅದನ್ನು ಜ್ಞಾನದ ಮೂಲಕ ಕೊಂಡುಕೊಳ್ಳಲಾಗದು. ತನ್ನದೇ ಕಾರಣಕ್ಕಾಗಿ ಜ್ಞಾನದ ಬೆನ್ನುಹತ್ತಿರುವ ಮನಸ್ಸು, ಕ್ರೂರವಾಗಿ ನಡೆದುಕೊಳ್ಳುವ ಮತ್ತು ಕೇವಲ ದಕ್ಷತೆಗಾಗಿ ಮಾತ್ರ ಕೆಲಸ ಮಾಡುವಂಥದ್ದಾಗಿರುತ್ತದೆ.

ಆದ್ದರಿಂದ, ಶಿಕ್ಷಕನು ಆರಂಭದಿಂದಲೇ ಪ್ರೀತಿಯ ಈ ಮೌಲ್ಯದಬಗೆಗೆ, ಅಂದರೆ ವಿನಯ, ಔದಾರ್ಯ, ಆದರ, ತಾಳ್ಮೆ ಮತ್ತು ಉತ್ತಮ ನಡವಳಿಕೆಗಳ ಕುರಿತು ಕಾಳಜಿ ಹೊಂದಿರಲೇಬೇಕಾಗುತ್ತದೆ. ಸೌಜನ್ಯ ಪೂರ್ಣವಿನಯಶೀಲತೆಯು ಉತ್ತಮ ಹಾಗೂ ಸರಿಯಾದ ಶಿಕ್ಷಣ ಹೊಂದಿರುವ ವ್ಯಕ್ತಿಯಲ್ಲಿ ಸಹಜವಾಗಿರುತ್ತದೆ; ಈ ಪ್ರೀತಿಯ ಗುಣವು

ಗಿಡಮರಗಳು, ಪ್ರಾಣಿಗಳು, ನಡವಳಿಕೆಯ ರೀತಿಗಳು ಮತ್ತು ಮಾತಿನರೀತಿ ನೀತಿಗಳಿಗೂ ಗಮನವೀಯುತ್ತದೆ.

ಮರ ಅಥವಾ ಮನುಷ್ಯ ಅಥವಾ ಪೀಠೋಪಕರಣದ ಒಂದು ತುಂಡು ಅಥವಾ ಇತ್ತೀಚಿನ ಮೋಟಾರ್ ಹೀಗೆ ಎಲ್ಲ ವಸ್ತುಗಳ ಬಗ್ಗೆ ಸಂವೇದನಾಶೀಲತೆಯನ್ನು, ಕಾಳಜಿಯನ್ನು ಚಿಕ್ಕ ವಯಸ್ಸಿನಿಂದಲೇ ಬೆಳೆಸುವುದು ಎಂಬುದು ಇದರ ಅರ್ಥ, ಹೌದು ತಾನೆ? ಪ್ರೀತಿಯ ಮೌಲ್ಯದ ಮೇಲಿನ ಈ ಒತ್ತು; ಸಂವೇದನಾಶೀಲತೆಯನ್ನು ಮತ್ತು ತನ್ನದೇ ಮಹತ್ವಾಕಾಂಕ್ಷೆಗಳು, ದುರಾಸೆಗಳು ಹಾಗೂ ಸಂಗ್ರಹಶೀಲತೆಯಲ್ಲಿ ಸ್ವ-ಮಗ್ನವಾಗಿರದ (self-absorbed) ಮನಸ್ಸನ್ನು ಸೃಜಿಸುತ್ತದೆ. ಇದು ತನ್ನಲ್ಲಿಯೇ ಸಂಸ್ಕಾರವನ್ನು ಸಂಚಯಿಸಿ, ಅದು; ಉತ್ತಮ ಅಭಿರುಚಿ, ಗೌರವಗಳ ರೂಪದಲ್ಲಿ ಅಭಿವ್ಯಕ್ತವಾಗುವುದಷ್ಟೇ ಅಲ್ಲದೆ, ಮನಸ್ಸಿಗೆ ಶುದ್ಧತೆಯನ್ನೂ ತರುತ್ತದೆ. ಇಲ್ಲದಿದ್ದಲ್ಲಿ, ಮನಸ್ಸು ಪ್ರತಿಷ್ಠೆಯಿಂದ ತನ್ನನ್ನೇ ಬಲಿಷ್ಠಗೊಳಿಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿರುತ್ತದೆ, ಅಲ್ಲವೆ? ತೊಡುವ ಬಟ್ಟೆ, ಮಾತು, ಹಾಗೂ ನಡವಳಿಕೆಗಳಲ್ಲಿನ ಸಚ್ಚಾರಿತ್ರ್ಯವು ತಾನಾಗಿ ಹೇರಿಕೊಂಡ ಹೊಂದಾಣಿಕೆ ಅಥವಾ ಹೊರಗಿನಿಂದ ಒತ್ತಾಯಿಸಲ್ಪಟ್ಟದ್ದಾಗಿರದೆ ಪ್ರೀತಿಯ ವಿಶಿಷ್ಟ ಗುಣದಿಂದ ಬರುವಂಥದ್ದು. ಈ ಗುಣವನ್ನು ಅರ್ಥಮಾಡಿಕೊಳ್ಳುವುದರೊಂದಿಗೆ ಮನುಷ್ಯ ಸಂಬಂಧದ ಲೈಂಗಿಕತೆ ಮತ್ತು ಎಲ್ಲ ಜಟಿಲತೆ ಹಾಗೂ ಸೂಕ್ಷ್ಮತೆಗಳನ್ನು ಸ್ವಸ್ಥಚಿತ್ತದಿಂದ ಸನ್ನಿಕರ್ಷಿಸಬಹುದೇ (approach) ಹೊರತು, ಭಾವೋದ್ವೇಗ ಮತ್ತು ಆತಂದಿಂದಲ್ಲ.

ಮನುಷ್ಯನ ಸಮಗ್ರ ಬೆಳವಣಿಗೆಗೆ ಪ್ರಮುಖ ಆದ್ಯತೆ ನೀಡುವ ಶಿಕ್ಷಕನು, ಲೈಂಗಿಕ ಹಂಬಲದ ಪರಿಣಾಮಗಳ ಕುರಿತು ಪ್ರಾರಂಭದಿಂದಲೇ ಕಾಳಜಿವಹಿಸಿ, ಮಕ್ಕಳ ಕುತೂಹಲವನ್ನು ಪ್ರಚೋದಿಸದೇ, ಅವರ ಕುತೂಹಲವನ್ನು ಎದುರುಗೊಳ್ಳತಕ್ಕದ್ದು (meet). ಲೈಂಗಿಕ ಹಂಬಲಗಳು ಮನುಷ್ಯ ಜೀವನದಲ್ಲಿ ತುಂಬ ಮಹತ್ವದಭಾಗವಾಗಿದ್ದು, ಪ್ರೀತಿಯ ವಿಶಿಷ್ಟ ಗುಣದ ಅರಿವಿಲ್ಲದಿದ್ದಲ್ಲಿ; ಕಿಶೋರಾವಸ್ಥೆಯಲ್ಲಿ ಕೇವಲ ಜೀವವಿಜ್ಞಾನದ ಜ್ಞಾನ ಅಥವಾ ಮಾಹಿತಿ ನೀಡಿಕೆಯು ಪ್ರಯೋಗಾತ್ಮಕ ಕಾಮುಕತೆಯಾಗಿ ಬಿಡಬಹುದು. ಪ್ರೀತಿಯುದುರುಳ ಮನಸ್ಸನ್ನು ನಿರ್ಮಲಗೊಳಿಸುತ್ತದೆ. ಇದನ್ನೆಲ್ಲ ಬಿಟ್ಟು, ಹುಡುಗ ಹುಡುಗಿಯರನ್ನು ಮುಳ್ಳಿನ ತಂತಿ ಅಥವಾ ಕಾಯ್ದೆ-ಕಾನೂನುಗಳಿಂದ ಪ್ರತ್ಯೇಕವಾಗಿರಿಸುವುದು ಅವರ ಕುತೂಹಲವನ್ನು ಹೆಚ್ಚಿಸುತ್ತದೆ ಮತ್ತು ಆ ಉದ್ವೇಗವು ಕೇವಲ ತಣಿಸಿಕೊಳ್ಳುವ ಹೀನ ಸ್ಥಿತಿಗಿಳಿಯುತ್ತದೆ. ಆದ್ದರಿಂದ, ಹುಡುಗ-ಹುಡುಗಿಯರಿಗೆ ಸರಿಯಾದ ಅರ್ಥದಲ್ಲಿ ಸಹ ಶಿಕ್ಷಣ ಕೊಡುವುದು ಬಹಳ ಮುಖ್ಯವಾಗುತ್ತದೆ.

ಪ್ರೀತಿಯ ಈ ಗುಣವು; ತೋಟಗಾರಿಕೆ, ಮರದ ಕೆತ್ತನೆ, ವರ್ಣಚಿತ್ರ ರಚನೆ, ಕರಕುಶಲ ಕೆಲಸ ಮುಂತಾದವುಗಳಲ್ಲಿ ನಮ್ಮ ಕೈಯಾರೆ ತೊಡಗಿಸಿಕೊಳ್ಳುವ ಮೂಲಕ ಮತ್ತು ಮರಗಳು, ಹರಿಯುವ ನೀರು, ಭೂಮಿಯ ಶ್ರೀಮಂತಿಕೆ ಮತ್ತು ಮನುಷ್ಯರು ತಾವೇ ಸೃಷ್ಟಿಸಿಕೊಂಡಿರುವ ಬಡತನವನ್ನು ಕಣ್ಣು ಕಿವಿಗಳ ಮೂಲಕ ಗಮನಿಸುವ ಮೂಲಕ ಹಾಗೂ ಪಕ್ಷಿಗಳ ಕೂಗು, ಸಂಗೀತ ಮತ್ತು ಹಾಡನ್ನು ಆಲಿಸುವ ಮೂಲಕ ಸ್ವತಃ ಅಭಿವ್ಯಕ್ತವಾಗತಕ್ಕದ್ದು.

ಕೇವಲ ಮನಸ್ಸು ಮತ್ತು ಭಾವನಾತ್ಮಕ ಸಂವೇದನೆಗಳ ಬಗ್ಗೆ ಮಾತ್ರವಲ್ಲದೆ, ದೇಹದ ಆರೋಗ್ಯದ ಕುರಿತೂ ನಾವು ಕಾಳಜಿಯನ್ನು ಹೊಂದಿದ್ದೇವೆ. ಆದ್ದರಿಂದ ನಾವು ಈ ಕುರಿತೂ ಸಾಕಷ್ಟು ಆಲೋಚನೆ ಮಾಡಬೇಕಿದೆ. ಏಕೆಂದರೆ, ದೇಹವು ಆರೋಗ್ಯಪೂರ್ಣವೂ, ಜೀವಧಾರಕವೂ ಆಗಿರದಿದ್ದರೆ ಖಂಡಿತವಾಗಿಯೂ ಅದು ವಿಚಾರವನ್ನು ಹದಗೆಡಿಸಿ ಅಸಂವೇದನಾಶೀಲತೆಗೆ ಎಡೆಮಾಡಿಕೊಡುತ್ತದೆ. ಇದು ಅತ್ಯಂತ ಸುಸ್ಪಷ್ಟ ಸಂಗತಿಯಾಗಿರುವುದರಿಂದ ನಾವು ವಿವರಗಳಿಗೆ ಹೋಗಬೇಕಿಲ್ಲ. ಸೂಕ್ತ ಆಹಾರ ಸೇವನೆ, ಸಾಕಷ್ಟು ನಿದ್ದೆಯೊಂದಿಗೆ ದೇಹವು ಅತ್ಯುತ್ತಮ ಆರೋಗ್ಯವನ್ನು ಹೊಂದಿರುವುದು ಅವಶ್ಯ.

ಇಂದ್ರಿಯಗಳು ಚುರುಕಾಗಿ ಸೂಕ್ಷ್ಮಗ್ರಾಹಿಯಾಗಿಲ್ಲದಿದ್ದರೆ ಮನುಷ್ಯನ ಸಮಗ್ರ ಬೆಳವಣಿಗೆಗೆ ದೇಹವು ಅಡ್ಡಿಯನ್ನುಂಟುಮಾಡುತ್ತದೆ. ಸೌಷ್ಠವ ಹಾಗೂ ಮಾಂಸಖಂಡಗಳ ಮೇಲೆ ನಿಯಂತ್ರಣ ಹೊಂದಲು ವಿವಿಧ ಬಗೆಯ ವ್ಯಾಯಾಮಗಳು, ನೃತ್ಯ, ಯೋಗ ಮತ್ತು ಕ್ರೀಡೆಗಳು ಇರಲೇಬೇಕಾಗುತ್ತದೆ. ಸ್ವಚ್ಛವಾಗಿಲ್ಲದ, ಉತ್ತಮ ಭಂಗಿಯಲ್ಲಿ ತನ್ನನ್ನು ತಾನು ಇರಿಸಿಕೊಳ್ಳಲಾರದ, ಓರಣವಿಲ್ಲದ ದೇಹವು ಮನಸ್ಸಿನ ಅಥವಾ ಭಾವಗಳ ಸೂಕ್ಷ್ಮಸಂವೇದನೆಗೆ ಸಹಾಯಕವಾಗದು. ದೇಹವು ಮನಸ್ಸಿನ ಉಪಕರಣವಲ್ಲ. ಆದರೆ ದೇಹ, ಭಾವಗಳು ಮತ್ತು ಮನಸ್ಸು ಸಂಪೂರ್ಣ ಮಾನವನನ್ನು ನಿರ್ಮಿಸುತ್ತವೆ. ಇವೆಲ್ಲವುಗಳ ಸಾಮರಸ್ಯದ ಸಹಜೀವನವಿಲ್ಲದಿದ್ದಲ್ಲಿ, ಸಂಘರ್ಷವು ಅನಿವಾರ್ಯವಾಗುತ್ತದೆ. ಸಂಘರ್ಷವು ಅಸಂವೇದನಾಶೀಲತೆಗೆ ಎಡೆಮಾಡಿಕೊಡುತ್ತದೆ. ಮನಸ್ಸು ದೇಹವನ್ನು ನಿಯಂತ್ರಿಸಬಹುದು ಅಥವಾ ಅದರ ಮೇಲೆ ಅಧಿಕಾರ ಸ್ಥಾಪಿಸಬಹುದು, ಇಂದ್ರಿಯಗಳನ್ನು ಹತ್ತಿಕ್ಕಿ ದೇಹವನ್ನು ಸಂವೇದನಾ ಶೂನ್ಯಗೊಳಿಸಬಹುದು. ಇಂಥ ಸಂವೇದನಾರಹಿತ ಶರೀರವು ಮನಸ್ಸಿನ ಸಮಗ್ರ ವಿಕಸನಕ್ಕೆ ಅಡ್ಡಿಯಾಗುತ್ತದೆ. ದೇಹವನ್ನುನಿಗ್ರಹಿಸುವುದರಿಂದ ಖಂಡಿತವಾಗಿಯೂ ಪ್ರಜ್ಞೆಯ ಆಳವಾದ ಸ್ತರಗಳನ್ನು ಶೋಧಿಸಲು ಸಹಾಯಕವಾಗುವುದಿಲ್ಲ. ಮನಸ್ಸು, ಭಾವಗಳು ಮತ್ತು ದೇಹವು ಯಾವುದೇ ಪರಿಕಲ್ಪನೆ, ನಂಬಿಕೆ ಅಥವಾ ಆದರ್ಶಕ್ಕೆ ಜೋತು ಬೀಳದೆ, ಪರಸ್ಪರ ವೈರುದ್ಧ್ಯವಿಲ್ಲದಾಗ ಮಾತ್ರ ಇದು ಸಾಧ್ಯವಾಗುವುದು.

ಮನಸ್ಸಿನ ಸಂವರ್ಧನೆಯಲ್ಲಿ 'ಗಮನಕ್ಕೆ' ಒತ್ತು ನೀಡಬೇಕೇ ಹೊರತು, ಏಕಾಗ್ರತೆಗಲ್ಲ. ಏಕಾಗ್ರತೆಯು ಮನಸ್ಸನ್ನು ವಿಷಯದತ್ತ ಕೇಂದ್ರೀಕರಿಸುವ ಸೀಮಿತ ಪ್ರಕ್ರಿಯೆಯಾಗಿದ್ದರೆ, ಗಮನಕ್ಕೆ ಸೀಮೆಗಳೇ ಇಲ್ಲ. ಏಕಾಗ್ರತೆಯು ಸದಾ ಸೀಮಾರೇಖೆ ಅಥವಾ ಮಿತಿಯನ್ನೊಳಗೊಂಡ ಸೀಮಿತ ಶಕ್ತಿಯಾಗಿದೆ. ಆದರೆ, ಮನಸ್ಸಿನ ಸಮಗ್ರತೆಯನ್ನು ಅರ್ಥಮಾಡಿಕೊಳ್ಳುವುದು ನಮ್ಮ ಕಾಳಜಿಯಾಗಿರುವುದರಿಂದ ಏಕಾಗ್ರತೆಯು ಅದಕ್ಕೆ ತಡೆಯನ್ನೊಡ್ಡುತ್ತದೆ. ಜ್ಞಾನದ ಸೀಮಾರೇಖೆಗಳಿಲ್ಲದ ಗಮನವು ಅಪರಿಮಿತವಾದುದು. ಜ್ಞಾನವು ಏಕಾಗ್ರತೆಯಿಂದ ಸಿದ್ಧಿಸುತ್ತದೆ. ಜ್ಞಾನದ ವಿಸ್ತರಣೆಯು ಏಕಾಗ್ರತೆಯ ಸೀಮಾರೇಖೆಗಳ ಒಳಗೇ ಇರುತ್ತದೆ. ಗಮನವು, ನಾವು ಆ ಪದವನ್ನು ಬಳಸುತ್ತಿರುವ ಅರ್ಥದಲ್ಲಿ, ಏಕಾಗ್ರತೆಯ ಫಲವಾಗಿರುವ ಜ್ಞಾನವನ್ನು ಉಪಯೋಗಿಸಬಲ್ಲದು ಮತ್ತು ಉಪಯೋಗಿಸುತ್ತದೆ; ಹೀಗೆ ಮಾಡುವುದು ಅಗತ್ಯವೂ ಹೌದು. ಅಂಶವು (part) ಎಂದೂ ಸಮಷ್ಠಿಯೆನಿಸದು. ಅನೇಕ ಅಂಶಗಳನ್ನು ಒಟ್ಟಿಗೆ ಸೇರಿಸಿದರೂ ಸಮಷ್ಠಿಯನ್ನು ನಿರ್ಮಿಸಲಾಗದು. ಏಕಾಗ್ರತೆಯ ಸಂಯೋಜನಾ ಪ್ರಕ್ರಿಯೆಯಾಗಿರುವ (Additive Process) ಜ್ಞಾನವು ಅಪರಿಮಿತದ ಅರಿವನ್ನು ಸೃಜಿಸದು. ಏಕಾಗ್ರ ಮನಸ್ಸಿನ ಆವರಣದೊಳಗೆ ಸಮಷ್ಠಿಯೆಂದಿಗೂ ಇರದು.

ನಮ್ಮ ಆಸಕ್ತಿಯು ಮನುಷ್ಯ ಹಾಗೂ ಆತನ ಮನಸ್ಸಿನ ಸಮಗ್ರ ಬೆಳವಣಿಗೆಯಾಗಿರುವುದರಿಂದ, ಗಮನವು ಅತ್ಯಂತ ಪ್ರಮುಖ ವಿಷಯವಾಗುತ್ತದೆ. ಈ ಗಮನವು ಏಕಾಗ್ರತೆಯನ್ನು ಸಾಧಿಸಲು ಮಾಡುವ ಪ್ರಯತ್ನದಿಂದ ಕೈಗೂಡುವಂಥದಲ್ಲ; ಆದರೆ ಅದು, ಜ್ಞಾನವು ಅನುಭವದ ರೂಪದಲ್ಲಿ ಒಟ್ಟುಗೂಡಿರುವ ಕೇಂದ್ರೀಕೃತ ಪರಿಧಿಯಿಲ್ಲದೆಯೇ ಮನಸ್ಸು ನಿರಂತರವಾಗಿ ಕಲಿಕೆಯಲ್ಲಿರುವ ಸ್ಥಿತಿ. ತನ್ನಲ್ಲಿಯೇ ಕೇಂದ್ರೀಕೃತವಾದ ಮನಸ್ಸಿನಿಂದ ಸ್ವಯಂ-ವಿಕಸನದ ಸಾಧನವಾಗಿ ಜ್ಞಾನವು ಬಳಕೆಯಾಗುತ್ತದೆ. ಆದ್ದರಿಂದ ಇಂಥ ಚಟುವಟಿಕೆಯು ಸ್ವ-ವಿರೋಧಾತ್ಮಕ ಹಾಗೂ ಸಮಾಜವಿರೋಧಿಯಾಗುತ್ತದೆ.

ವ್ಯಕ್ತಿಯ ಸಮಗ್ರ ಬೆಳವಣಿಗೆ ಮತ್ತು ಸಮಾಜದಲ್ಲಿ ನಮತ್ತೊಬ್ಬರೊಂದಿಗಿನ ಆತನ ಸಂಬಂಧವು ನಮ್ಮ ಕಾಳಜಿಯಾಗಿರುವುದರಿಂದ ಗಮನಕ್ಕೆ ಒತ್ತು ನೀಡಬೇಕೇವಿನಃ ಕೇವಲ ಏಕಾಗ್ರತೆಗಲ್ಲ. ಬಾಹ್ಯ ಅಥವಾ ಆಂತರಿಕ ಒತ್ತಾಯವಿಲ್ಲದ ಗಮನದ ಸ್ಥಿತಿಯಲ್ಲಿ ಮಾತ್ರ ಕಲಿಕೆ ಸಾಧ್ಯವಾಗುತ್ತದೆ. ಮನಸ್ಸು ಸಂಪ್ರದಾಯ ಮತ್ತು ನೆನಪುಗಳಿಗೆ ಬದ್ಧವಾಗಿಲ್ಲದಿದ್ದಲ್ಲಿ

ಮಾತ್ರ ಸರಿಯಾದ ಆಲೋಚನೆ ಸಾಧ್ಯವಾಗುತ್ತದೆ. ಸೃಜನೆಗೆ ಬಾಗಿಲನ್ನು ತೆರೆಯುವ ಮೌನವು ಮನಸ್ಸನ್ನು ಪ್ರವೇಶಿಸಲು ಅನುವು ಮಾಡಿಕೊಡುವುದು ಈ ಗಮನವೇ. ಗಮನಕ್ಕೆ ಅತ್ಯಂತ ಹೆಚ್ಚಿನ ಮಹತ್ವವಿದೆ.

ಮನಸ್ಸನ್ನು ವಿಕಸಿತಗೊಳಿಸುವ ಸಾಧನವಾಗಿ ಮಾತ್ರ ಜ್ಞಾನದ ಅವಶ್ಯಕತೆ ಇದೆಯೇ ವಿನಃ ಅದುವೇ ಕೊನೆಯಲ್ಲ. ನಾವು ಕಾಳಜಿವಹಿಸಿರುವುದು ಒಬ್ಬ ಗಣಿತಜ್ಞ ಅಥವಾ ವಿಜ್ಞಾನಿ ಇಲ್ಲವೇ ಸಂಗೀತಗಾರನ ಸಾಮರ್ಥ್ಯವನ್ನು ಬೆಳೆಸುವುದರಲ್ಲಿ ಅಲ್ಲ. ಆದರೆ ಈ ಎಲ್ಲವನ್ನೂ ಒಳಗೊಂಡ ವಿದ್ಯಾರ್ಥಿಯ ಸಮಗ್ರ ಬೆಳವಣಿಗೆಯಲ್ಲಿ.

ಈ ಗಮನವನ್ನು ಹೇಗೆ ಸಾಧಿಸಬಹುದು? ಬಲವಂತದ ವಿವಿಧ ರೂಪಗಳಾದ; ಯಾವುದೇ ರೀತಿಯ ಮನವೊಲಿಕೆ, ಹೋಲಿಕೆ, ಬಹುಮಾನ ಅಥವಾ ಶಿಕ್ಷೆಯಿಂದ ಇದನ್ನು ರೂಢಿಸಲಾಗುವುದಿಲ್ಲ. ಭಯದ ನಿವಾರಣೆಯು ಗಮನದ ಆರಂಭ. ತನ್ನೆಲ್ಲ ಹತಾಶೆಗಳು ಮತ್ತು ಹಿಂಸಾತ್ಮಕ ವೈರುದ್ಧ್ಯಗಳೊಂದಿಗೆ ವ್ಯಕ್ತಗೊಳ್ಳುವ ಯಶಸ್ಸನ್ನು ತಾನು ಗಳಿಸಬೇಕೆಂಬ ಅಥವ ತಾನು ಯಶಸ್ವಿಯಾಗಬೇಕೆಂಬ ಪ್ರಬಲ ಅಪೇಕ್ಷೆಯಿರುವವರೆಗೂ ಭಯದ ಉಪಸ್ಥಿತಿಯು ಅವಶ್ಯ. ನೀವು ಏಕಾಗ್ರತೆಯನ್ನು ಕಲಿಸಿದಂತೆ ಗಮನವನ್ನು ಕಲಿಸಲಾಗುವುದಿಲ್ಲ. ಭಯದಿಂದ ಬಿಡುಗಡೆ ಪಡೆಯುವುದು ಹೇಗೆ ಎಂಬುದನ್ನು ಕಲಿಸಲಾಗುವುದಿಲ್ಲ. ಆದರೆ ಭಯವನ್ನು ಹುಟ್ಟಿಸುವ ಕಾರಣಗಳನ್ನು ನಾವು ಹುಡುಕಲು ಪ್ರಾರಂಭಿಸಬಹುದು. ಈ ಎಲ್ಲ ಕಾರಣಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಭಯದ ನಿವಾರಣೆಯಾಗುವುದುಂಟು. ಆದ್ದರಿಂದ, ಭೌತಿಕವಾಗಿ ಕ್ಷೇಮಕರವಾಗಿರುವ, ತಾನು ಸುರಕ್ಷಿತವಾಗಿದ್ದೇನೆಂಬ ಹಾಗೂ ನಾವು ಈ ಹಿಂದೆಚರ್ಚಿಸಿದಂತೆ, ಮನೆಯಲ್ಲಿದ್ದೇನೆಂಬ ಭಾವ ಮತ್ತು ಪ್ರೀತಿಯೊಂದಿಗೆ ಏರ್ಪಡುವ ನಿರ್ಲಿಪ್ತ ಕ್ರಿಯೆಯನ್ನೊಳಗೊಂಡ ವಾತಾವರಣವು ವಿದ್ಯಾರ್ಥಿಯ ಸುತ್ತಲೂ ಇದ್ದಾಗ ಗಮನವು ಸಾಧ್ಯವಾಗುತ್ತದೆ. ಪ್ರೀತಿಯು ಹೋಲಿಸುವುದಿಲ್ಲವಾದ್ದರಿಂದ `ಆಗುವಿಕೆ'ಯ ಯಾತನೆ (torture) ಇಲ್ಲವಾಗುತ್ತದೆ.

ದೊಡ್ಡವರಿರಲಿ ಚಿಕ್ಕವರಿರಲಿ ನಾವೆಲ್ಲರೂ ಅನುಭವಿಸುವ ಸಾರ್ವತ್ರಿಕ ಅತೃಪ್ತಿಯು ಬಹು ಬೇಗನೇ ತೃಪ್ತಿಯ ದಾರಿಯನ್ನು ಹುಡುಕುತ್ತದೆ. ಇದರಿಂದಾಗಿಯೇ ನಮ್ಮ ಮನಸ್ಸು ನಿದ್ರೆಗೆ ಜಾರುತ್ತದೆ. ನೋವಿನಿಂದಾಗಿ ಆಗಾಗ ಅದು ಎಚ್ಚರಗೊಳ್ಳುತ್ತದೆ. ಈ ಯಾತನೆಯು ಮತ್ತೊಮ್ಮೆ ಸಂತೋಷದಾಯಕ ಪರಿಹಾರವನ್ನು ಅರಸುತ್ತದೆ. ಹೀಗೆ ಮನಸ್ಸು ಈ ತೃಪ್ತಿ-ಅತೃಪ್ತಿಯ ಚಕ್ರದಲ್ಲಿ ಸಿಲುಕಿರುತ್ತದೆ. ನೋವಿನಿಂದಾಗಿ ಉಂಟಾಗುವ ಎಚ್ಚರವು ಈ ಅತೃಪ್ತಿಯ ಭಾಗವಾಗಿರುತ್ತದೆ. ಅತೃಪ್ತಿಯು ಶೋಧನೆಯ ದಾರಿ. ಮನಸ್ಸು; ಸಂಪ್ರದಾಯ, ಆದರ್ಶಗಳ ಮಿತಿಯಲ್ಲಿ ಸಿಲುಕಿದ್ದಲ್ಲಿ ಶೋಧನೆಯು ಸಾಧ್ಯವಾಗುವುದಿಲ್ಲ. ಈ ಶೋಧನೆಯು ಗಮನದ ಜ್ಯೋತಿಯೆನಿಸಿದೆ.

ನಮ್ಮ ಅರ್ಥದಲ್ಲಿ ಅತೃಪ್ತಿ ಎಂದರೆ, ಇರುವುದನ್ನು, ವಾಸ್ತವವನ್ನು ಅರ್ಥಮಾಡಿಕೊಳ್ಳುವ ಹಾಗೂ ಮತ್ತಷ್ಟು ಆಳವಾಗಿ ಶೋಧಿಸುವ ಮನಸ್ಸಿನ ಸ್ಥಿತಿ. ಇರುವುದರ ಮಿತಿಗಳನ್ನು ದಾಟಿ ಹೋಗುವ ಈ ಚಲನೆಯೇ `ಅತೃಪ್ತಿ'. ನಿಮಗಲ್ಲಿ ಉಸಿರುಗಟ್ಟಿದಾಗ ಅಥವಾ ಅತೃಪ್ತಿಯಿಂದ ಹೊರಬರುವ ದಾರಿಗಳನ್ನು, ಸಾಧನಗಳನ್ನು ಹುಡುಕಿಕೊಂಡಾಗ ಸ್ವ-ಕೇಂದ್ರಿತ ಚಟುವಟಿಕೆಯ ಹಾಗೂ ನೀವು ಭಾಗವಾಗಿರುವ ಸಮಾಜದ ಮಿತಿಗಳನ್ನು ಒಪ್ಪಿಕೊಳ್ಳುತ್ತೀರಿ. ನಮ್ಮಲ್ಲಿ ಬಹುಪಾಲು ಜನರು ಅತೃಪ್ತಿಯಿಂದ ಹೊರ ಬರಲು ಅದನ್ನು ಇಲ್ಲವಾಗಿಸುವ ವಿವಿಧ ಮಾರ್ಗಗಳನ್ನು ಅರಸುತ್ತಾರೆ. ಆದರೆ, ಅತೃಪ್ತಿಯು ತೃಪ್ತಿಯ ಕಸವನ್ನು ಸುಟ್ಟುಹಾಕುವ ಜ್ವಾಲೆ. ಸ್ವಲ್ಪ ಹೆಚ್ಚಿನದಕ್ಕಾಗಿ, ಮತ್ತಷ್ಟು ದೊಡ್ಡಮನೆ ಮುಂತಾದವುಗಳಿಗಾಗಿ ವ್ಯಕ್ತಗೊಳ್ಳುವ ಅತೃಪ್ತಿಯು ಅಸೂಯೆಯ ಕ್ಷೇತ್ರದ ಒಳಗೇ ಇರುತ್ತದೆ. ಅಸೂಯೆಯು ಈ ಅತೃಪ್ತಿಯನ್ನು ಜೀವಂತವಾಗಿರಿಸುತ್ತದೆ. ಆದರೆ, ನಾವು ಅಸೂಯೆ ಅಥವಾ `ಹೆಚ್ಚಿನದಕ್ಕಾಗಿ' ಪಡುವದುರಾಸೆಯ ಬಗೆಗೆ ಮಾತನಾಡುತ್ತಿಲ್ಲ. ಯಾವುದೇ ಆಸೆ

ಅಥವಾ ಹೆಚ್ಚಿನ ಅನುಭವದ ನಿಟ್ಟಿನಲ್ಲಿ ಉದ್ದೀಪನಗೊಂಡಿರದ ಅತೃಪ್ತಿಯ ಬಗೆಗೆ ಮಾತನಾಡುತ್ತಿದ್ದೇವೆ. ಅನುಚಿತ ಶಿಕ್ಷಣ ಅಥವಾ ಯಾವುದೇ ಆದರ್ಶದ ಮೂಲಕ ತನ್ನ ಬೆಲೆ ಕಳೆದುಕೊಳ್ಳದಿದ್ದಲ್ಲಿ, ಈ ಅತೃಪ್ತಿಯು ಇರಲೇಬೇಕಾದ ಮತ್ತು ಇದ್ದೇ ಇರುವ ಒಂದು ಶುದ್ಧವಾದ ಸ್ಥಿತಿ. ಈ ಅತೃಪ್ತಿಯ ಸ್ವರೂಪವನ್ನು ನಾವು ಅರ್ಥಮಾಡಿಕೊಂಡಾಗ, ಗಮನವು; ಕ್ಷುಲ್ಲಕವಾದುದನ್ನು ಆಪೋಷನ ಮಾಡಿ ಸ್ವ-ಸಮಾವೃತ (self-enclosing) ಅನುಸರಣೆ ಮತ್ತು ತೃಪ್ತಿಯ ಮಿತಿಗಳಿಲ್ಲದಂತೆ ಮನಸ್ಸನ್ನು ಮುಕ್ತಗೊಳಿಸುವ ಉರಿವಜ್ವಾಲೆಯ ಒಂದು ಭಾಗವೆಂಬುದನ್ನು ಅರಿಯುತ್ತೇವೆ. ಆದ್ದರಿಂದ, ಸ್ವಯಂ ಪ್ರಗತಿ ಅಥವಾ ತೃಪ್ತಿಗಳನ್ನು ಆಧರಿಸದ ಶೋಧನೆ ಇದ್ದಾಗ ಮಾತ್ರ ಗಮನವು ಅಸ್ತಿತ್ವಕ್ಕೆ ಬರುತ್ತದೆ.

ಈ ಗಮನವನ್ನುಆರಂಭದಿಂದಲೇ ಸಂವೃದ್ಧಿಗೊಳಿಸಬೇಕು. ವಿನಯ, ಸೌಜನ್ಯ, ತಾಳ್ಮೆ ಮತ್ತು ಮೃದುತ್ವಗಳ ಮೂಲಕ ಅಭಿವ್ಯಕ್ತವಾಗುವ ಪ್ರೀತಿ ಇದ್ದಾಗ ನೀವು ಅದನ್ನು ಕಂಡುಕೊಳ್ಳುತ್ತೀರಿ. ಅಸಂವೇದನೆಯು ನಿರ್ಮಿಸುವ ಗಡಿಗಳನ್ನು ಆಗಲೇ ಇಲ್ಲವಾಗಿಸುತ್ತಿರುತ್ತೀರಿ; ಹೀಗಾಗಿ, ಚಿಕ್ಕ ವಯಸ್ಸಿನಿಂದಲೇ, ಈ ಗಮನದ ಸ್ಥಿತಿಯನ್ನು ರೂಢಿಸುತ್ತಿರುತ್ತೀರಿ. ಈ ಗಮನವನ್ನು ಕಲಿಯಲು ಆಗುವುದಿಲ್ಲ. ಆದರೆ, ವಿದ್ಯಾರ್ಥಿಯ ಸುತ್ತಮುತ್ತ ಒತ್ತಾಯ ಮತ್ತು ಸ್ವ-ವಿರೋಧಾತ್ಮಕತೆ ಇಲ್ಲದಿದ್ದಾಗ ಆತನಲ್ಲಿ ಅದು ಅಳವಡಲು ನೀವು ಸಹಾಯ ಮಾಡಬಹುದು. ಆಗ, ಆತನ ಗಮನವನ್ನು ಯಾವುದೇ ಕ್ಷಣದಲ್ಲಿ ಯಾವುದೇ ವಿಷಯಕ್ಕೆ ಕೇಂದ್ರೀಕರಿಸಲು ಸಾಧ್ಯವಾಗುತ್ತದೆ. ಆದರಿದು ಅರ್ಜನೆಯ ಒತ್ತಾಯಪೂರ್ವಕ ಪ್ರಬಲ ಅಪೇಕ್ಷೆಯಿಂದ ಅಥವಾ ಸಾಧನೆಗೈಯುವ ಮೂಲಕ ಸಿದ್ಧಿಸುವ ಏಕಾಗ್ರತೆ ಅಲ್ಲ.

ಈ ರೀತಿಯಲ್ಲಿ ಶಿಕ್ಷಣ ಪಡೆದ ತಲೆಮಾರು ತಮ್ಮ ಪಾಲಕರ ಮತ್ತು ತಾನು ಜನ್ಮತಾಳಿರುವ ಸಮಾಜದ ಮಾನಸಿಕ ಉತ್ತರಾಧಿಕಾರದಿಂದ ಮುಕ್ತವಾಗಿದ್ದು, ಈ ರೀತಿಯ ಶಿಕ್ಷಣವನ್ನು ಪಡೆದಿರುವ ಕಾರಣದಿಂದಾಗಿ, ಆಸ್ತಿಯ ಉತ್ತರಾಧಿಕಾರವನ್ನು ಅವಲಂಬಿಸಿರುವುದಿಲ್ಲ. ಈ ಉತ್ತರಾಧಿಕಾರವು ಸ್ವಾತಂತ್ರ್ಯವನ್ನು ಹಾಳುಮಾಡಿ, ಬುದ್ಧಿಶಕ್ತಿಯನ್ನು ಸೀಮಿತಗೊಳಿಸುತ್ತದೆ. ಏಕೆಂದರೆ, ಅದುಭದ್ರತೆಯ ಮಿಥ್ಯಾಭಾವವನ್ನು ಹುಟ್ಟಿಸಿ, ಆಧಾರವಿಲ್ಲದ ಸ್ವಯಂ-ಭರವಸೆಗೆ ಎಡೆಮಾಡಿಕೊಡುತ್ತದೆ. ಹುಸಿ ಭದ್ರತೆಯ ಭಾವವು ಮನಸ್ಸಿನ ಕತ್ತಲೆ; ಅದರಲ್ಲಿ ಯಾವುದರ ಸಂವೃದ್ಧಿಯೂ ಸಾಧ್ಯವಾಗುವುದಿಲ್ಲ. ನಾವೀಗ ಚರ್ಚಿಸುತ್ತಿರುವ; ಸಂಪೂರ್ಣವಾಗಿ ವಿಭಿನ್ನರೀತಿಯಲ್ಲಿ ಶಿಕ್ಷಣ ಪಡೆದ ತಲೆಮಾರು ಹೊಸ ಸಮಾಜವನ್ನು ಹುಟ್ಟುಹಾಕುತ್ತದೆ. ಕಾರಣವೇನೆಂದರೆ, ಅದಕ್ಕೆ ಪ್ರಜ್ಞಾವಂತಿಕೆಯಿಂದ ಹುಟ್ಟಿಕೊಂಡಿರುವ ಸಾಮರ್ಥ್ಯವಿರುತ್ತದೆ. ಆ ಪ್ರಜ್ಞಾವಂತಿಕೆಗೆ ಭಯದ ಅಡ್ಡಗೋಡೆಗಳಿರುವುದಿಲ್ಲ.

ನಮ್ಮ ಕಾಳಜಿಯು, ವಿದ್ಯಾರ್ಥಿಯ ಸಮಗ್ರ ಬೆಳವಣಿಗೆ ಕುರಿತೇ ವಿನಃ ಕೇವಲ ಯಾವುದೋ ಒಂದು ನಿರ್ದಿಷ್ಟ ಅಂಶದ ಕುರಿತಲ್ಲ, ಎಲ್ಲವನ್ನೂ ಒಳಗೊಂಡಿರುವ ಗಮನ ಮುಖ್ಯವಾಗುತ್ತದೆ. ಈ ಸಮಗ್ರ ಬೆಳವಣಿಗೆಯು ಪರಿಕಲ್ಪನಾತ್ಮವಾದುದಲ್ಲ. ಮನುಷ್ಯನ ಮನಸ್ಸಿನ ಸಮಗ್ರತೆಯ ನೀಲನಕ್ಷೆ ಎಂಬುದು ಇರುವುದಿಲ್ಲ. ಮನಸ್ಸು ತನ್ನನ್ನು ತಾನು ಹೆಚ್ಚು ಹೆಚ್ಚು ಉಪಯೋಗಿಸಿದಷ್ಟೂ ಅದರ ಅಂತಃಶಕ್ತಿ ಹೆಚ್ಚುತ್ತದೆ. ಮನಸ್ಸಿನ ಸಾಮರ್ಥ್ಯವು ಅನಂತವಾಗಿದೆ.

ಶಿಕ್ಷಣವು ಒಬ್ಬನ ಕೆಲಸವಾಗಿರದೇ; ಪಾಲಕರು, ಶಿಕ್ಷಕರು ಹಾಗೂ ಮತ್ತಿತರರು ಒಟ್ಟಾಗಿ ನಡೆಸುವ ಕಾರ್ಯವಾಗಿರುವುದರಿಂದ, ಎಲ್ಲರೂ ಕೂಡಿ ಕೆಲಸಮಾಡುವ ಕಲೆಯನ್ನು ಕಲಿಯಬೇಕಿದೆ. ನಾವು ಪ್ರತಿಯೊಬ್ಬರೂ ಸತ್ಯವನ್ನು ಗ್ರಹಿಸಿದಾಗ, ಒಟ್ಟಾಗಿ ಕೆಲಸ ಮಾಡುವುದು ಸಾಧ್ಯವಾಗುತ್ತದೆ. ನಮ್ಮನ್ನು ಒಂದಾಗಿಸುವುದು ಸತ್ಯವೇ ವಿನಃ, ಅಭಿಪ್ರಾಯ ಅಥವಾ ನಂಬಿಕೆ ಅಥವಾ ಸಿದ್ಧಾಂತವಲ್ಲ. ಪರಿಕಲ್ಪನೆ ಮತ್ತು ವಾಸ್ತವದ ನಡುವೆ ಅಗಾಧ

ವ್ಯತ್ಯಾಸವಿದೆ. ಪರಿಕಲ್ಪನಾತ್ಮಕವಾದುದು ಆರ್ಥಿಕ ಅಥವಾ ಬೇರೆ ಕಾರಣಗಳಿಗಾಗಿ ನಮ್ಮನ್ನು ಹತ್ತಿರತರಬಹುದು. ಆದರೆ ಅದು ಕೇವಲ ಗಾಢನಂಬಿಕೆಯ ವಿಷಯವೆನಿಸಿದಾಗ ಬೇರ್ಪಡುವುದೂ ಉಂಟು. ಸತ್ಯವನ್ನು ಕಾಣಲು ಸಾಧ್ಯವಿದ್ದರೆ, ವಿವರಗಳಲ್ಲಿ ಭಿನ್ನಾಭಿಪ್ರಾಯವಿರಬಹುದಾದರೂ ಬೇರ್ಪಡುವ ಪ್ರಬಲ ಅಪೇಕ್ಷೆಯಿರುವುದಿಲ್ಲ. ಕೆಲವು ವಿವರಗಳ ವ್ಯತ್ಯಾಸಗಳಿಂದಾಗಿ ಬೇರ್ಪಡುವುದು ಮೂರ್ಖತನ. ಆ ಭಿನ್ನಾಭಿಪ್ರಾಯವುಳ್ಳ ವಿವರವನ್ನು ಎಂದಿಗೂ ಸಮಸ್ಯೆಯನ್ನಾಗಿಸುವುದು ಸಾಧ್ಯವಿಲ್ಲ. ಯಾವುದೋ ಒಂದು ಪರಿಕಲ್ಪನೆ ಅಥವಾ ಆದರ್ಶವನ್ನು ನಿರ್ವಹಿಸುವ ನಿಟ್ಟಿನಲ್ಲಿ ನಾವು ಒಟ್ಟುಗೂಡಬಹುದು. ಆದರೆ, ಇವು ವಾಸ್ತವವಲ್ಲವಾದ್ದರಿಂದ ಇವುಗಳಿಗೆ ಗಾಢನಂಬಿಕೆ, ಅನುಸರಣೆ, ಪ್ರಚಾರ ಮುಂತಾದವುಗಳ ಅಗತ್ಯ ಉಂಟಾಗುತ್ತದೆ. ನಮ್ಮಲ್ಲಿನ ಬಹಳಷ್ಟು ಜನರು ಈ ರೀತಿ ಸ್ಥಾಪಿತ ಅಧಿಕಾರದ ಹಾದಿಯಲ್ಲಿಕೂಡಿ ಕೆಲಸಮಾಡುವುದಕ್ಕೆ ಹೊಂದಿಕೊಂಡಿದ್ದೇವೆ.

ಒಂದು ಪರಿಕಲ್ಪನೆಗಾಗಿ, ಆದರ್ಶಕ್ಕಾಗಿ ಒಟ್ಟಾಗಿ ಕೆಲಸಮಾಡುವುದು ಮತ್ತು ಸತ್ಯದಗ್ರಹಿಕೆಯ ನಿಟ್ಟಿನಲ್ಲಿ ಕೈಗೊಂಡ ಕ್ರಿಯೆ ಹಾಗೂ ಕ್ರಿಯೆಯಲ್ಲಿನ ಸತ್ಯದ ಅವಶ್ಯಕತೆಗಳೆರಡೂ ಸಂಪೂರ್ಣವಾಗಿ ವಿಭಿನ್ನ ಚಟುವಟಿಕೆಗಳು. ಅಧಿಕಾರದ ಉತ್ತೇಜನದಿಂದ ಕೆಲಸವನ್ನು ನಿರ್ವಹಿಸುವುದು ಸಹಕಾರವಲ್ಲ. ಆ ಅಧಿಕಾರವು ಆದರ್ಶದ ಅಧಿಕಾರವಾಗಿದ್ದಿರಬಹುದು ಅಥವಾ ಆ ಆದರ್ಶವನ್ನು ಪ್ರತಿನಿಧಿಸುವ ವ್ಯಕ್ತಿಯ ಅಧಿಕಾರವಾಗಿದ್ದಿರಬಹುದು. ನಿರ್ದಿಷ್ಟ ವಿಚಾರಗಳೊಂದಿಗೆ ಪ್ರಬಲ ವ್ಯಕ್ತಿತ್ವವನ್ನು ಹೊಂದಿರುವವರು ಕೇಂದ್ರಸ್ಥ ಅಧಿಕಾರವನ್ನು ಹೊಂದಿರುತ್ತಾರೆ; ಇವರು, ತಾವು ಪರಿಗಣಿಸಿದ ಆದರ್ಶದೊಂದಿಗೆ ಸಹಕರಿಸಲು ಇತರರನ್ನು ಸೂಕ್ಷ್ಮವಾಗಿ ಅಥವಾ ಇನ್ನಾವುದೇ ಮಾರ್ಗದಿಂದ ಒತ್ತಾಯಿಸುತ್ತಾರೆ. ಇದು ಖಂಡಿತವಾಗಿಯೂ ಕೂಡಿ ಕೆಲಸ ಮಾಡುವುದು ಅಲ್ಲವೇ ಅಲ್ಲ. ಆದರೆ, ನಾವು ಪ್ರತಿಯೊಬ್ಬರೂ ಕೆಲವು ಸಂಗತಿಗಳ ಸತ್ಯವನ್ನುಅರಿತಾಗ, ಈ ಸತ್ಯದ ಅರಿವು ಅವನ್ನು ಕ್ರಿಯೆಗೆ ಇಳಿಸಲು ನಮ್ಮನ್ನು ಹತ್ತಿರತರುತ್ತದೆ. ಇದು ನಿಜವಾದ ಸಹಕಾರ. ಸತ್ಯವನ್ನು ಸತ್ಯವಾಗಿ, ಸುಳ್ಳನ್ನು ಸುಳ್ಳಾಗಿ ಕಾಣುವ ಹಾಗೂ ಸುಳ್ಳಿನಲ್ಲಿಇರುವ ಸತ್ಯವನ್ನು ಕಾಣುವ ಕಾರಣದಿಂದಾಗಿ, ಸಹಕರಿಸಲು ಕಲಿತಿರುವ ವ್ಯಕ್ತಿಯು ಸಹಕರಿಸದೇ ಇರಲು ಕೂಡ ಕಲಿಯುತ್ತಾನೆ. ಇದು ಸಹಕರಿಸಲು ಕಲಿಯುವಷ್ಟೇ ಮುಖ್ಯವಾದುದು.

ನಾವು ಪ್ರತಿಯೊಬ್ಬರೂ ಶಿಕ್ಷಣದಲ್ಲಿ ಮೂಲಭೂತ ಕ್ರಾಂತಿಯ ಅಗತ್ಯವನ್ನು ಮನಗಂಡು, ನಾವು ಇಲ್ಲಿ ಹೇಳಿರುವುದರ ಸತ್ಯವನ್ನು ಅರಿತರೆ, ಯಾವುದೇ ಸಹಮತ ಅಥವಾ ಭಿನ್ನಮತ ಇಲ್ಲದೆ, ಯಾವುದೇ ರೀತಿಯ ಅನುಸರಣೆಗಳಿಲ್ಲದೆ ಒಟ್ಟಾಗಿ ಕೆಲಸಮಾಡಬಹುದು. ಯಾವುದೇ ವ್ಯಕ್ತಿಯು ತನ್ನ ನಿಶ್ಚಿತ ಅಭಿಪ್ರಾಯದಿಂದ ಹೊರಬರಲು ಸಿದ್ಧನಿಲ್ಲದಿದ್ದಾಗ, ಅಥವಾ ಆತನು ವಿಚಾರವೊಂದರ ಬಗ್ಗೆ ದೃಢ ವಿಶ್ವಾಸವನ್ನು ಹೊಂದಿದ್ದಾಗ ಅಥವಾ ಯಾವುದೋ ಅಭಿಪ್ರಾಯವೊಂದರಿಂದ ಗಾಢವಾಗಿ ಆವರಿಸಲ್ಪಟ್ಟಿದ್ದಾಗ ಸಹಮತ ಅಥವಾ ಭಿನ್ನಮತಗಳು ಹುಟ್ಟಿಕೊಳುತ್ತವೆ. ಇವನು ವಿರೋಧವನ್ನೂ ಹುಟ್ಟುಹಾಕುತ್ತಾನೆ. ಇಂಥ ಸನ್ನಿವೇಶ ಉದ್ಭವಿಸಿದಾಗ, ಯಾರಾದರೊಬ್ಬರಿಗೆ ಮನವರಿಕೆ ಮಾಡಿಕೊಡಲು ಅಥವಾ ಪ್ರಭಾವ ಬೀರಲು ಅಥವಾ ಅವರು ಬೇರೆ ರೀತಿಯಲ್ಲಿ ಆಲೋಚಿಸಲು ಪ್ರೇರೇಪಿಸಬೇಕು. ನಮ್ಮಲ್ಲಿನ ಪ್ರತಿಯೊಬ್ಬರೂ ಸತ್ಯವನ್ನು ಅರ್ಥ ಮಾಡಿಕೊಂಡಾಗ ಇಂಥ ಸನ್ನಿವೇಶವೆಂದಿಗೂ ಉದ್ಭವಿವುದಿಲ್ಲ. ಆಗ ಅದು ಕೇವಲ ಮೌಖಿಕ ನಿಶ್ಚಿತಾಭಿಪ್ರಾಯ ಅಥವಾ ಬೌದ್ಧಿಕ, ತಾರ್ಕಿಕ ಪ್ರಯತ್ನವಾಗಿರದೆ, ಸತ್ಯವನ್ನು ಅರ್ಥಮಾಡಿಕೊಳ್ಳುವ ಕ್ರಿಯೆಯಾಗಿರುತ್ತದೆ. ನಾವು ಸತ್ಯವನ್ನು ಅರ್ಥಮಾಡಿಕೊಳ್ಳದೇ ಇದ್ದಾಗ ತಮ್ಮಲ್ಲ ವಿರೂಪಿತ ಹಾಗೂ ಅನುಪಯುಕ್ತ ಪ್ರಯತ್ನದಿಂದ ವಾದ ವಿವಾದ, ಸಹಮತ ಅಥವ ಭಿನ್ನಮತಗಳು ಕಾಣಿಸಿಕೊಳ್ಳುತ್ತವೆ. ನಾವೆಲ್ಲರೂ ಕೂಡಿ ಒಂದು ಮನೆಯನ್ನು ಕಟ್ಟುತ್ತಿರುವುದರಿಂದ, ನಾವೆಲ್ಲ ಒಟ್ಟಾಗಿ ಕೆಲಸ ಮಾಡಬೇಕಿರುವುದು ಅಗತ್ಯ. ನಮ್ಮಲ್ಲೊಬ್ಬರು ಮನೆಯನ್ನು ಕಟ್ಟುವುದು, ಮತ್ತೊಬ್ಬರು ಅದನ್ನು ಹಾಳುಗೆಡಹುವುದು ಎಂದಾದರೆ, ಮನೆಯನ್ನು ಕಟ್ಟಲು

ಆಗುವುದಿಲ್ಲ. ಆದ್ದರಿಂದ, ಜೀವನದ ಸವಾಲುಗಳನ್ನು ಸಮಗ್ರತೆಗೆ ಸಂಬಂಧವಿಲ್ಲದ ಪ್ರತ್ಯೇಕ ಭಾಗಗಳಾಗಿ ನಿರ್ವಹಿಸದೆ; ಸಮಗ್ರವಾಗಿ ನಿರ್ವಹಿಸುವ ಸಾಮರ್ಥ್ಯವುಳ್ಳ ಹೊಸ ತಲೆಮಾರೊಂದನ್ನು ಸೃಜಿಸುವ ಅಗತ್ಯವನ್ನು ನಿಜವಾಗಿಯೂ ಅರ್ಥಮಾಡಿಕೊಳ್ಳಬೇಕೆಂಬುದನ್ನು ನಾವು ಸುಸ್ಪಷ್ಟಪಡಿಸಿಕೊಳ್ಳತಕ್ಕದ್ದು.

ಈ ಬಗೆಯ ಸಹಕಾರದ ದಾರಿಯಲ್ಲಿ ಕೂಡಿ ಕೆಲಸಮಾಡಲು ನಾವು ಮೇಲಿಂದ ಮೇಲೆ ಭೇಟಿಯಾಗಬೇಕು ಮತ್ತು ವಿವರಗಳಲ್ಲಿ ಮುಳುಗಿ ಹೋಗದಂತೆ ಎಚ್ಚರವಹಿಸಬೇಕು. ಈ ಅರಿವಿಗೆ ಗಂಭೀರವಾಗಿ ಸಮರ್ಪಿಸಿಕೊಂಡವರು ತಾವು ಅರ್ಥಮಾಡಿಕೊಂಡಿರುವುದನ್ನೆಲ್ಲ ಕಾರ್ಯಾನ್ವಿತಗೊಳಿಸುವುದು ಮಾತ್ರವಲ್ಲದೆ, ಬೇರೆಯವರೂ ಈ ಅರಿವನ್ನು ಪಡೆಯುವಂತೆ ಪ್ರಯತ್ನಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಅಧ್ಯಾಪನವನ್ನು ವೃತ್ತಿ ಎಂದು ಕರೆಯುವುದಾದರೆ, ಅದು ಅತ್ಯುನ್ನತ ವೃತ್ತಿ. ಕಲಿಸುವ ಕಲೆಯು ಗಣನೀಯ ಬೌದ್ಧಿಕ ಸಾಮರ್ಥ್ಯಗಳನ್ನು ಬಯಸದೇ ಅನಂತವಾದ ಸಹನೆ ಹಾಗೂ ಪ್ರೀತಿಯನ್ನು ಬಯಸುತ್ತದೆ. ಹಣ, ಆಸ್ತಿ, ಜನ, ಪ್ರಕೃತಿಮುಂತಾಗಿ ಈ ವಿಶಾಲ ವಿಶ್ವದೊಳಗಿನ ಎಲ್ಲವುಗಳೊಂದಿಗಿನ ಸಂಬಂಧವನ್ನು ಅರ್ಥಮಾಡಿಕೊಳ್ಳುವುದೇ ಶಿಕ್ಷಣ. ಹೌದಲ್ಲವೆ?

ಸೌಂದರ್ಯವು ಕೇವಲ ಪ್ರಮಾಣಬದ್ಧತೆ, ರೂಪ, ರುಚಿ ಮತ್ತು ವರ್ತನೆಯಷ್ಟೇ ಅಲ್ಲ. ಅದು ಸರಳತೆಯ ತೀವ್ರ ಹಂಬಲದಲ್ಲಿ ಸ್ವ-ಕೇಂದ್ರೀಯತೆಯನ್ನು ಪರಿತ್ಯಜಿಸಿರುವ ಮನಸ್ಥಿತಿ. ಲೆಕ್ಕಾಚಾರದಿಂದ ಹುಟ್ಟುವ ನಿರಾಕರಣೆ ಹಾಗೂ ಶಿಸ್ತುಬದ್ಧ ಸ್ವಯಂ-ಅನುಸರಣೆಯ ಪ್ರತ್ಯುತ್ತರವಲ್ಲದ ಆತ್ಮಸಂಯಮ ಮತ್ತು ಪ್ರೀತಿಯಿಂದ ಮಾತ್ರ ಸಾಧ್ಯವಾಗುವ ಸ್ವಯಂ-ಪರಿತ್ಯಾಗವಿದ್ದಾಗ ಮಾತ್ರ ಸರಳತೆ ಇರುತ್ತದೆ. ಸರಳತೆಗೆ ಕೊನೆಯೇ ಇಲ್ಲ. ಇದಾವುದೂ ಇಲ್ಲದೇ, ಆಂತರಿಕ ಸತ್ವ ಹಾಗೂ ಸರಳ ಸ್ವಯಂ-ಪರಿತ್ಯಾಗದ ದೃಢತೆಯಿಲ್ಲದಂತೆ, ಸ್ವರೂಪದ ಸೌಂದರ್ಯಕ್ಕೆ ಆದ್ಯತೆ ನೀಡಿದ ನಾಗರಿಕತೆಯನ್ನು ನಾವು ಸೃಷ್ಟಿಸುತ್ತೇವೆ. ಚಟುವಟಿಕೆಗೆ, ಆದರ್ಶಗಳಿಗೆ, ನಂಬಿಕೆಗಳಿಗೆ ಬಲಿಯಾಗಿರುವ ಅಹಂ ಇದ್ದಾಗ `ಪರಿತ್ಯಾಗ' ಸಾಧ್ಯವಾಗುವುದಿಲ್ಲ. ಇವು ದೊಡ್ಡ ಕ್ಷೇತ್ರವಾಗಿ ತೋರುತ್ತವೆ, ಆದರೆ ವಾಸ್ತವದಲ್ಲಿ ವಿಭಿನ್ನ ಹೆಸರುಗಳಡಿ ಅಹಂ ಇನ್ನೂ ಕೆಲಸ ಮಾಡುತ್ತಿರುತ್ತದೆ. ಮುಗ್ಧ ಮನಸ್ಸು ಮಾತ್ರ ಅಗಾಧವಾದ ಅ-ಜ್ಞಾತದ (unknown) ಶೋಧನೆ ಮಾಡಬಲ್ಲದು. ಆದರೆ ಕೌಪೀನ ಅಥವಾ ನಿಲುವಂಗಿಯ ಸನ್ಯಾಸಿಯ ಲೆಕ್ಕಾಚಾರದ ಸರಳತೆಯು ಎಂದಿಗೂ ಈ ಅಹಂ-ಪರಿತ್ಯಾಗದ ಹತ್ತಿರವೂ ಬರಲಾಗದು. ಪ್ರೀತಿಯ ಅಭಿವ್ಯಕ್ತಿಗಳಾದ ಸೌಜನ್ಯ, ಸೌಮ್ಯತೆ, ವಿನಯ ಹಾಗೂ ತಾಳ್ಮೆಯು ಈ ಭಾವತೀವ್ರತೆಯಿಂದಬರುತ್ತವೆ.

ರಚಿತವಾಗಿರುವ ಅಥವಾ ಒಂದೆಡೆ ಸೇರಿಸಿ ನಿರ್ಮಿಸಲಾಗಿರುವ ಒಂದು ಮಾನವ ರೂಪ ಅಥವಾ ಒಂದು ದೇವಾಲಯದ ಸೌಂದರ್ಯ ನಮಗೆ ಪರಿಚಿತ. ಆ ಮರ, ಆ ಮನೆ, ವಿಶಾಲವಾಗಿ ತಿರುವು ತೆಗೆದುಕೊಳ್ಳುತ್ತಿರುವ ನದಿ ಸುಂದರವಾಗಿದೆ ಎಂದು ನಾವು ಹೇಳುತ್ತೇವೆ. ಹೋಲಿಕೆಯಿಂದಾಗಿ, ಯಾವುದು ಕುರೂಪಿಯಾಗಿದೆ ಎಂದು ನಾವು ತಿಳಿದುಕೊಳ್ಳುತ್ತೇವೆ. ಕೊನೆಯ ಪಕ್ಷ ಹೀಗೆ ಯೋಚಿಸುತ್ತೇವೆ. ಸೌಂದರ್ಯವು ಹೋಲಿಸುವಂತಹುದೇ? ವ್ಯಕ್ತ ಹಾಗೂ ಸುಸ್ಪಷ್ಟವಾಗಿರುವುದು ಮಾತ್ರ ಸೌಂದರ್ಯವೆ? ಒಂದು ಚಿತ್ರ, ಒಂದು ಕವನ, ಒಂದು ಮುಖ ಸುಂದರವಾಗಿದೆ ಎಂದು ಹೇಳುತ್ತೇವೆ. ನಮಗೆ ಈಗಾಗಲೇ ಏನನ್ನು ಕಲಿಸಲಾಗಿದೆಯೋ ಆ ಪ್ರಕಾರವಾಗಿ ನಮ್ಮಲ್ಲಿ ಗ್ರಹಿಕೆ ಹಾಗೂ ಅನಿಸಿಕೆಗಳಿರುವುದರಿಂದಾಗಿ ಅಥವ ಈಗಾಗಲೇ ಆ ಕುರಿತು ನಮಗೆ ಹೆಚ್ಚು ಹೊಕ್ಕು ಬಳಕೆ ಇರುವುದರಿಂದಾಗಿ ಅಥವಾ ನಾವು ರೂಪಿಸಿಕೊಂಡಿರುವ ಅಭಿಪ್ರಾಯದಿಂದಾಗಿ ಹಾಗೆ ಅಂದುಕೊಳ್ಳುತ್ತೇವೆ. ಆದರೆ, ಹೋಲಿಸುವುದರಿಂದ ಸೌಂದರ್ಯವು ಕಾಣದಂತಾಗುತ್ತದೆ ಅಲ್ಲವೆ? ಸೌಂದರ್ಯವು ಕೇವಲ ಜ್ಞಾತದ-ಗೊತ್ತಿರುವುದರ (known) ಜ್ಞಾನವೆ? ಇಲ್ಲವೇ ಸೃಷ್ಟಿತವಾಗಿರುವುದರ ಅಸ್ತಿತ್ವವೇ ಅಥವಾ ಇಲ್ಲದಿರುವ ಒಂದು ಇರುವಿಕೆಯೇ?

ನಾವು ಸದಾ ಸೌಂದರ್ಯದ ಬೆನ್ನು ಹತ್ತಿ ಕುರೂಪವನ್ನು ಪರಿವರ್ಜಿಸುತ್ತೇವೆ (avoid). ಒಂದರ ಪರಿವರ್ಜನೆಹಾಗೂ ಮತ್ತೊಂದರ ಪುಷ್ಟೀಕರಣವು ಖಂಡಿತವಾಗಿಯೂ ಅಸಂವೇದನಾಶೀಲತೆಯನ್ನು ಹುಟ್ಟುಹಾಕುತ್ತದೆ. ಸೌಂದರ್ಯವನ್ನು ಅರ್ಥಮಾಡಿಕೊಳ್ಳಲು ಅಥವಾ ಅನುಭವಿಸಲು, ಈ ಎರಡರ ಬಗ್ಗೆಯೂ ಅಂದರೆ; `ಸುಂದರ' ಹಾಗೂ `ಕುರೂಪ' ಎಂಬುದಾಗಿ ಕರೆಯಲ್ಪಡುವವೆರಡರ ಬಗ್ಗೆಯೂ ಸಂವೇದನಾಶೀಲವಾಗಿರುವ ಅಗತ್ಯವಿದೆ. ಅನಿಸಿಕೆಯು (feeling) ಸುಂದರವೂ ಅಲ್ಲ ಕುರೂಪವೂ ಅಲ್ಲ; ಅದು ಕೇವಲ ಅನಿಸಿಕೆಯಷ್ಟೇ. ನಾವದನ್ನು ನಮ್ಮ ಶಿಕ್ಷಿತ (educated) ಹಾಗೂ ಸಾಮಾಜಿಕ ಕಟ್ಟುಪಾಡುಗಳ ಮೂಲಕ ಸನ್ನಿಕರ್ಷಿಸಿದಾಗ (approach) ಮಾತ್ರ ಅದನ್ನು ಉತ್ತಮ ಅನಿಸಿಕೆ ಮತ್ತು ಕೆಟ್ಟ ಅನಿಸಿಕೆಯೆಂದು ಕರೆದು ಅನಿಸಿಕೆಯನ್ನು ಹಾಳುಮಾಡುತ್ತೇವೆ, ಅಥವ ವಿರೂಪಗೊಳಿಸುತ್ತೇವೆ. ಆದರೆ ಉತ್ತಮ ಅಥವಾ ಕೆಟ್ಟ ಎಂದು ಹಣೆಪಟ್ಟಿ ಕೊಡದ ಅನಿಸಿಕೆಯು ಮಾತ್ರ ಗಾಢವಾಗಿ ಉಳಿದಿರುತ್ತದೆ. ಈ ಬಗೆಯ ಭಾವತೀವ್ರತೆಯ ಗಾಢತೆಯು ವ್ಯಕ್ತ ಸೌಂದರ್ಯವಾಗಲಿ ಕುರೂಪವಾಗಲಿ ಅಲ್ಲದಿರುವುದರ ಗ್ರಹಿಕೆಯ ಅನ್ವೇಷಣೆಗೆ ಅಗತ್ಯವಾಗಿರುತ್ತದೆ.

ಕೇವಲ ಸ್ವಸಂತುಷ್ಟಿಯ ಅತಿಯಾಸೆಯಲ್ಲದ ಭಾವೋದ್ವೇಗದ ನಿರಂತರ ಹಾಗೂ ಜೀವಂತಭಾವದ ಅಸಾಧಾರಣವಾದ ಮಹತ್ವವನ್ನು ನಾವು ಒತ್ತಿ ಹೇಳುತ್ತಿದ್ದೇವೆ. ಇದುವೇ ಸೌಂದರ್ಯವನ್ನು ಸೃಷ್ಟಿಸುವಂಥದು. ಇದು ಹೋಲಿಸಲಾಗದಂಥದ್ದು. ಹಾಗಾಗಿ, ಇದಕ್ಕೆ ವಿರುದ್ಧವೆಂಬುದು ಇರುವುದಿಲ್ಲ.

ಮಾನವನ ಒಟ್ಟು ಬೆಳವಣಿಗೆಯು ನಮ್ಮ ಆಸಕ್ತಿಯ ವಿಷಯವಾಗಿರುವುದರಿಂದ ನಾವು ಕೇವಲ ಜಾಗೃತ ಮನಸ್ಸು ಮಾತ್ರವಲ್ಲದೆ, ಸುಪ್ತ ಮನಸ್ಸಿನ ಬಗ್ಗೆ ಕೂಡ ಸಂಪೂರ್ಣವಾಗಿ ಕಾಳಜಿವಹಿಸಬೇಕಾಗುತ್ತದೆ. ಸುಪ್ತ ಮನಸ್ಸನ್ನು ಅರ್ಥಮಾಡಿಕೊಳ್ಳದೇ ಕೇವಲ ಜಾಗೃತ ಮನಸ್ಸಿನ ಶಿಕ್ಷಣಕ್ಕೆ ಪ್ರಯತ್ನಿಸುವುದು ಮನುಷ್ಯನ ಜೀವನದಲ್ಲಿ ಹತಾಶೆ ಹಾಗೂ ದುಃಖಗಳೊಂದಿಗೆ ವೈರುದ್ಧ್ಯವನ್ನು ತಂದೊಡ್ಡುತ್ತದೆ. ಅಲ್ಪಜ್ಞ (superficial) ಮನಸ್ಸಿಗಿಂತ ಅಗೋಚರ ಮನಸ್ಸು ಅತ್ಯಗತ್ಯವಾದುದು ಮತ್ತು ಕಸುವುಳ್ಳದ್ದೂ ಆಗಿರುತ್ತದೆ. ಬಹಳಷ್ಟು ಶಿಕ್ಷಕರು ಸಮಾಜದಲ್ಲಿ ಹೊಂದಿಕೊಳ್ಳಲು, ನೌಕರಿಯೊಂದನ್ನು ಪಡೆದುಕೊಳ್ಳಲು; ಜ್ಞಾನ ಎಂದು ಕರೆಯಲಾಗುತ್ತಿರುವ ಮಾಹಿತಿಯನ್ನುನೀಡುವ ಅಲ್ಪಜ್ಞ ಮನಸ್ಸಿನ ಶಿಕ್ಷಣದಲ್ಲಿ ಆಸಕ್ತರಾಗಿದ್ದಾರೆ. ಇದರಿಂದ ಅಗೋಚರ ಮನಸ್ಸನ್ನು ಸ್ಪರ್ಶಿಸುವುದು ಸಾಧ್ಯವಾಗುವುದೇ ಇಲ್ಲ. ಎಲ್ಲ ಶಿಕ್ಷಕರು ಮಾಡಿರುವುದೇನೆಂದರೆ, ತಾಂತ್ರಿಕ ಜ್ಞಾನದ ಸ್ತರವನ್ನು ಮತ್ತು ಪರಿಸರಕ್ಕೆ ಹೊಂದಿಕೊಳ್ಳುವ ಸಾಮರ್ಥ್ಯವನ್ನು ಮನಸ್ಸಿನ ಮೇಲೆ ಹೇರಿರುವುದು.

ಆದರೆ, ಮಾನವನ ಸಮಗ್ರ ಬೆಳವಣಿಗೆಯು ನಮ್ಮ ಕಾಳಜಿಯಾಗಿರುವುದರಿಂದ ಅಗೋಚರ ಮನಸ್ಸಿನ ಸ್ಥಿತಿಯನ್ನು ಕೂಡ ಅರ್ಥಮಾಡಿಕೊಳ್ಳಬೇಕು. ಅಲ್ಪಜ್ಞ ಮನಸ್ಸು ಎಷ್ಟೇ ಹೆಚ್ಚಿನ ಶಿಕ್ಷಣ ಪಡೆದಿದ್ದರೂ, ಎಷ್ಟೇ ಹೊಂದಾಣಿಕೆಯ ಸಾಮರ್ಥ್ಯವನ್ನು ಹೊಂದಿದ್ದರೂ, ಅಗೋಚರ ಮನಸ್ಸು ಅತಿಹೆಚ್ಚಿನ ಸಾಮರ್ಥ್ಯವನ್ನು ಹೊಂದಿದೆ. ಅಗೋಚರ ಮನಸ್ಸು ಹೆಚ್ಚು ರಹಸ್ಯಮಯವಾದುದೇನಲ್ಲ. ಧರ್ಮವಾಗಿ, ಮೂಢನಂಬಿಕೆಯಾಗಿ, ಸಂಕೇತವಾಗಿ, ನಿರ್ದಿಷ್ಟ ಜನಾಂಗದ ಸಂಪ್ರದಾಯವಾಗಿ, ಅದರ ಸಾಹಿತ್ಯದ ಪ್ರಭಾವವಾಗಿ, ಪವಿತ್ರವೋ ಅಪವಿತ್ರವಾವೋ ಆಗಿ; ಒಂದುನಿರ್ದಿಷ್ಟ ಗುಂಪಿನ ಸಾಮೂಹಿಕ ಪ್ರಭಾವವಾಗಿ, ತನ್ನದೇ ಆದ ವಿಶಿಷ್ಟ ಸಂಪ್ರದಾಯಗಳಾಗಿ, ಆಕಾಂಕ್ಷೆ ಮತ್ತು ಹತಾಶೆಗಳಾಗಿ, ಸಂಕೇತಗಳು, ವರ್ತನೆಗಳು ಮತ್ತು ಆಹಾರ; ತನ್ನ ಉದ್ದೇಶಗಳು ಮತ್ತು ಹತಾಶೆಗಳನ್ನೊಳಗೊಂಡ ಮುಕ್ತ ಹಾಗೂ ಗೋಚರಿತವಲ್ಲದ ಆಸೆ, ಅದರ ಭರವಸೆಗಳು ಮತ್ತು ಭಯಗಳು, ಅಡಗಿರುವ ದುಃಖಗಳು-ಸುಖಗಳು ಮತ್ತು ಭದ್ರತೆಯ ಪ್ರಬಲ ಅಪೇಕ್ಷೆಯಿಂದ ವಿವಿಧ ಮಾರ್ಗಗಳಲ್ಲಿ ಪರಿವರ್ತಿತಗೊಂಡ ನಿರಂತರ ನಂಬಿಕೆಗಳಾಗಿ

ಖಂಡಿತವಾಗಿಯೂ ಅದು, ಜನಾಂಗದ ನೆನಪುಗಳ ಸಂಗ್ರಹಾಲಯದಂತಿರುತ್ತದೆ. ಈ ಅಗೋಚರ ಮನಸ್ಸುಗತದ ಈ ಎಲ್ಲ ಪಳಿಯುಳಕೆಯಾಗಿ ಅಸಾಮಾನ್ಯವಾದ ಸಾಮರ್ಥ್ಯವನ್ನು ಮಾತ್ರವಲ್ಲ, ಹತ್ತಿರದ ಅಥವಾ ದೂರದ ಭವಿಷ್ಯವನ್ನು ಮುಂಗಾಣುವ ಶಕ್ತಿಯನ್ನೂ ಪಡೆದಿರುತ್ತದೆ. ಪ್ರತಿನಿತ್ಯದ ಸಂಗತಿಗಳಲ್ಲಿ ಪೂರ್ಣವಾಗಿ ತೊಡಗಿಕೊಳ್ಳದೇ ಇರುವಾಗ ಇದೆಲ್ಲವೂ ಕನಸುಗಳ ಮೂಲಕ ಮತ್ತು ಅಲ್ಪಜ್ಞ ಮನಸ್ಸಿಗೆ ವಿವಿಧ ಸೂಚನೆಗಳನ್ನು ಕೊಡುವ ಮೂಲಕ ತನ್ನನ್ನು ತಾನು ಅಭಿವ್ಯಕ್ತಗೊಳಿಸುತ್ತಿರುತ್ತದೆ. ಅಗೋಚರ ಮನಸ್ಸು ಪವಿತ್ರವೂ ಅಲ್ಲ; ಇದಕ್ಕೆ ಅಂಜಬೇಕಾದುದೂ ಇಲ್ಲ. ಇದು ಅಲ್ಪಜ್ಞ ಮನಸ್ಸಿನಲ್ಲಿ ಪ್ರಕಟಗೊಳ್ಳಲು ತಜ್ಞರನ್ನು ಬಯಸುವುದೂ ಇಲ್ಲ. ಅಗೋಚರ ಮನಸ್ಸಿಗೆ ಅಗಾಧವಾದ ಶಕ್ತಿ ಇರುವುದರಿಂದಾಗಿ ಅಲ್ಪಜ್ಞ ಮನಸ್ಸು ತನ್ನಿಚ್ಛೆಯಂತೆ ಅದನ್ನು ನಿಭಾಯಿಸಲು ಸಾಧ್ಯವಾಗುವುದಿಲ್ಲ. ತನ್ನದೇ ಸ್ವಂತ ಅಗೋಚರ ಮನಸ್ಸಿಗಿಂತಲೂ ಅಲ್ಪಜ್ಞ ಮನಸ್ಸು ಅತ್ಯಂತ ದುರ್ಬಲ ಎಂದೇ ಹೇಳಬೇಕು. ತನ್ನ ತಕ್ಷಣದ ಸಾಮಾಜಿಕ ಬೇಡಿಕೆಗಳು ಮತ್ತು ಅವುಗಳ ಅನುಸರಣೆಯ ಕಾರಣದಿಂದಾಗಿ ಅಲ್ಪಜ್ಞ ಮನಸ್ಸು ಸುಪ್ತಮನಸ್ಸನ್ನು ಅಧೀನದಲ್ಲಿಡಲು, ಅದರ ಮೇಲೆ ನಿಯಂತ್ರಣವನ್ನು ಸಾಧಿಸಲು, ಅದಕ್ಕೊಂದು ರೂಪಕೊಡಲು ಎಷ್ಟೇ ಪ್ರಯತ್ನಿಸಿದರೂ, ಅದು ಅಗೋಚರ ಮನಸ್ಸಿನ ಮೇಲೆ ಒಂದು ಸಣ್ಣಗೆರೆಯನ್ನು ಮಾತ್ರ ಕೊರೆಯಬಹುದಷ್ಟೇ. ಹೀಗಾಗಿ ಅಗೋಚರ ಹಾಗೂ ವ್ಯಕ್ತ ಮನಸ್ಸಿನ ನಡುವೆ ಸದಾ ಬಿರುಕು ಮತ್ತು ವೈರುದ್ಧ್ಯವಿರುತ್ತದೆ.

ಈ ಬಿರುಕನ್ನು ನಾವು ಶಿಸ್ತು,, ವಿವಿಧ ಆಚರಣೆಗಳು, ನಿಷೇಧ ಮುಂತಾದವುಗಳ ಮೂಲಕ ತುಂಬಲು ಯತ್ನಿಸುತ್ತೇವೆ. ಆದರೆ ಅದನ್ನು ಹಾಗೆ ತುಂಬಲಾಗದು. ಏಕೆಂದರೆ, ಜಾಗೃತ ಮನಸ್ಸು ಕೇವಲ ವರ್ತಮಾನದಲ್ಲಿ - ಸೀಮಿತ ವರ್ತಮಾನ ಎಂಬ ಅರ್ಥದಲ್ಲಿ ಪ್ರವೃತ್ತವಾಗಿರುತ್ತದೆ. ಅದುವೇ ಅಗೋಚರ ಮನಸ್ಸು, ವರ್ತಮಾನದ ಯಾವುದೇ ಅಗತ್ಯವು ಒತ್ತಟ್ಟಿಗೆ ಸರಿಸಲಾಗದ ಶತಶತಮಾನಗಳ ಮಹತ್ವವನ್ನು ಹೊಂದಿರುತ್ತದೆ. ಅಗೋಚರ ಮನಸ್ಸು ಆಳವಾದ ಕಾಲದ ಗುಣವನ್ನು ಹೊಂದಿದೆ. ತನ್ನಇತ್ತೀಚಿನ ಬೆಳವಣಿಗೆಯಿಂದಾಗಿ ಅಲ್ಪಜ್ಞ ಮನಸ್ಸು, ತನ್ನ ಕ್ಷಣಿಕ ತುರ್ತುಗಳಿಗೆ ಅನುಗುಣವಾಗಿ ಅದರೊಂದಿಗೆ ವ್ಯವಹರಿಸಲಾರದು.

ಆದುದರಿಂದ, ವೈರುದ್ಧ್ಯವನ್ನು ಇಲ್ಲವಾಗಿಸಲು, ಅಲ್ಪಜ್ಞ ಮನಸ್ಸು ಈ ವಾಸ್ತವವನ್ನು ಅರಿಯಬೇಕು ಮತ್ತು ಶಾಂತವಾಗಬೇಕು. ಇದರರ್ಥ, ಅಗೋಚರವಾದುದರ ಅಸಂಖ್ಯಾತ ತುಡಿತಗಳಿಗೆ ಇಂಬು ನೀಡಬೇಕು ಎಂದಲ್ಲ. ಮುಕ್ತ ಮತ್ತು ಅಗೋಚರದ ನಡುವೆ ಪ್ರತಿರೋಧವಿಲ್ಲದಿದ್ದಾಗ ಅಗೋಚರವಾದುದಕ್ಕೆ ಕಾಲದ ಮಿತಿಯಿಲ್ಲದಿರುವುದರಿಂದ, ಅದು ವರ್ತಮಾನವನ್ನು ಅತಿಕ್ರಮಿಸುವುದಿಲ್ಲ.

ಅಗೋಚರವಾದ, ಶೋಧಿತವಾಗಿರದ ಮತ್ತು ಅರ್ಥವಾಗಿರದ, ತನ್ನ ಅಲ್ಪಜ್ಞತೆಯೊಂದಿಗೆ ಶಿಕ್ಷಣವನ್ನು ಪಡೆದಿರುವ ಮನಸ್ಸು ವರ್ತಮಾನ-ವರ್ತಮಾನದ ಸವಾಲು ಮತ್ತು ಬೇಡಿಕೆಗಳೊಂದಿಗೆ ಸಂಪರ್ಕಕ್ಕೆ ಬರುತ್ತದೆ. ಅಲ್ಪಜ್ಞ ಮನಸ್ಸು ಈ ಸವಾಲುಗಳಿಗೆ ಸಾಕಷ್ಟು ಸ್ಪಂದಿಸಬಹುದು, ಆದರೆ ಅಲ್ಪಜ್ಞ ಮನಸ್ಸಿಗೂ ಅಗೋಚರ ಮನಸ್ಸಿಗೂ ವೈರುದ್ಧ್ಯವಿರುವುದರಿಂದ, ಈ ಅಲ್ಪಜ್ಞ ಮನಸ್ಸಿನ ಯಾವುದೇ ಅನುಭವವು ಸ್ವಯಂ ಮತ್ತು ಅಗೋಚರ ಮನಸ್ಸಿನ ನಡುವಿನ ವೈರುಧ್ಯವನ್ನು ಇನ್ನೂ ಹೆಚ್ಚಿಸುತ್ತದೆ. ಮತ್ತಷ್ಟು ಅನುಭವಗಳನ್ನು ಒದಗಿಸುವ ಇದು, ವರ್ತಮಾನ ಮತ್ತು ಭೂತಗಳ ನಡುವೆ ಇನ್ನೂ ಹೆಚ್ಚಿನ ಅಂತರವನ್ನು ಉಂಟುಮಾಡುತ್ತದೆ. ಒಳಗಿನ ಅಗೋಚರ ಮನಸ್ಸನ್ನು ಅರ್ಥಮಾಡಿಕೊಳ್ಳದೇ ಅನುಭವಗಳನ್ನು ಪಡೆಯುವ ಅಲ್ಪಜ್ಞ ಮನಸ್ಸು, ಮತ್ತಷ್ಟು ಆಳವಾದ ಮತ್ತು ವಿಸ್ತೃತ ಸಂಘರ್ಷವನ್ನು ಹುಟ್ಟುಹಾಕುತ್ತದೆ. ನಾವೆಲ್ಲರೂ ಸಾಮಾನ್ಯವಾಗಿ ಭಾವಿಸುವಂತೆ ಅನುಭವಗಳು ವಿಮುಕ್ತ ಅಥವ ಸಂಪನ್ನಗೊಳಿಸುವುದಿಲ್ಲ. ಅನುಭವಗಳು ಅನುಭವಿಸುವವರನ್ನು ಸಶಕ್ತಗೊಳಿಸುತ್ತಿರುವ ತನಕ ಸಂಘರ್ಷ ಇದ್ದೇ ಇರುತ್ತದೆ.

ಕಟ್ಟುಪಾಡಿಗೊಳಪಟ್ಟ ಅನುಭವಯುಕ್ತ ಮನಸ್ಸು ಕಟ್ಟುಪಾಡುಗಳನ್ನು ಸಶಕ್ತಗೊಳಿಸುತ್ತದೆಯಷ್ಟೇ. ಹಾಗಾಗಿ, ಸಂಘರ್ಷ ಹಾಗೂ ದುಃಖವನ್ನು ಹೆಚ್ಚಿಸುತ್ತದೆ. ತನ್ನ ಎಲ್ಲ ದಾರಿಗಳನ್ನು ಅರ್ಥಮಾಡಿಕೊಳ್ಳುವ ಮನಸ್ಸಿಗೆ ಮಾತ್ರ ಅನುಭವವು ಬಿಡುಗಡೆಯ ಕಾರಕವೆನಿಸಲು (factor) ಸಾಧ್ಯ.

ಅಗೋಚರ ಮನಸ್ಸಿನ ಹಲವು ಸ್ತರಗಳ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾದಾಗ, ವಿವೇಕಪೂರ್ಣವಾಗಿ ಮತ್ತು ಬುದ್ಧಿವಂತಿಕೆಯಿಂದ ವಿವರಗಳನ್ನು ತಿಳಿಯಬಹುದು. ಜ್ಞಾನಾರ್ಜನೆಗಾಗಿ ಅಲ್ಪಜ್ಞ ಮನಸ್ಸಿಗೆ ಶಿಕ್ಷಣವನ್ನು ನೀಡುವ ಅಗತ್ಯವಿದ್ದಾಗ್ಯೂ, ಅದು ಮುಖ್ಯವಲ್ಲ. ಅಗೋಚರ ಮನಸ್ಸನ್ನು ಅರ್ಥಮಾಡಿಕೊಳ್ಳುವುದು ಮುಖ್ಯವಾದುದು. ಈ ಅರ್ಥಮಾಡಿಕೊಳ್ಳುವಿಕೆಯು ಮನಸ್ಸನ್ನು ಸಂಘರ್ಷದಿಂದ ಸಂಪೂರ್ಣವಾಗಿ ಮುಕ್ತಗೊಳಿಸುತ್ತದೆ; ಹೀಗಾದ ಬಳಿಕವೇ ಬುದ್ಧಿಮತ್ತೆಯು ಆವಿರ್ಭವಿಸುತ್ತದೆ.

ಮನುಷ್ಯನ ಸಮಗ್ರ ಬೆಳವಣಿಗೆಯು ನಮ್ಮ ಕಾಳಜಿ ಆಗಿರುವುದರಿಂದ, ದಿನನಿತ್ಯದ ಕಾರ್ಯಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಅಲ್ಪಜ್ಞ ಮನಸ್ಸಿಗೆ ಸಂಪೂರ್ಣ ಸಾಮರ್ಥ್ಯವನ್ನು ನೀಡುವುದಷ್ಟೇ ಅಲ್ಲದೆ, ಅಗೋಚರ ಮನಸ್ಸನ್ನೂ ಅರ್ಥೈಸಿಕೊಳ್ಳಬೇಕಿದೆ. ಏಕೆಂದರೆ, ಅಗೋಚರವನ್ನು ಅರಿಯುವುದರಿಂದ ಸಮಗ್ರ ಜೀವನವು ಸಾಧ್ಯವೆನಿಸಿ, ಅದರಲ್ಲಿ ದುಃಖ ಮತ್ತು ಸಂತೋಷದ ವೈರುದ್ಧ್ಯಗಳು ಇಲ್ಲವಾಗುತ್ತವೆ. ಅಗೋಚರ ಮನಸ್ಸಿನ ಕ್ರಿಯೆಗಳ ಬಗ್ಗೆ ಅರಿವುಳ್ಳವರಾಗಿರುವುದು, ಅದರ ಪರಿಚಯವನ್ನು ಹೊಂದಿರುವುದು ಅತ್ಯವಶ್ಯಕ. ಅದರಲ್ಲೇ ಮುಳುಗಿಹೋಗದೇ ಮತ್ತು ಅದಕ್ಕೆ ಅನಗತ್ಯ ಮಹತ್ವ ನೀಡದೇ ಇರುವುದು ಕೂಡ ಅಷ್ಟೇ ಮುಖ್ಯ. ಆಗ ಮಾತ್ರ ಅಲ್ಪಜ್ಞ ಹಾಗೂ ಅಗೋಚರ ಮನಸ್ಸು, ತನ್ನದೇ ಆದ ಮಿತಿಗಳನ್ನು ದಾಟಿ ಹೋಗಲು ಮತ್ತುಕಾಲಾತೀತವಾದ ಆನಂದವನ್ನು ಶೋಧಿಸಲು ಸಾಧ್ಯವಾಗುತ್ತದೆ.

Krishnamurti, J. (2012-03-13). The Collected Works of J. Krishnamurti: 1958-1960: Volume 11: Crisis in Consciousness (Kindle Locations 429-430). . Kindle Edition.